*Department of Public Instruction, Mysore.*

# 1897ನೆಯ ಇಸವಿಯ ಲೋವರ್ ಸೆಕಂಡರಿ ಪರೀಕ್ಷೆಗೆ ಗೊತ್ತಾದ ಕನ್ನಡ ಟೆಕ್ಸ್ಟ್ ಬುಕ್.

# KANNADA TEXT

FOR

## THE LOWER SECONDARY EXAMINATION OF 1897.

FIRST EDITION 3,000 COPIES.

MYSORE:

GOVERNMENT BRANCH PRESS,

1896.

*Department of Public Instruction, Mysore.*

# 1897ನೆಯ ಇಸವಿಯ ಲೋವರ್ ಸೆಕಂಡರಿ ಪರೀಕ್ಷೆಗೆ ಗೊತ್ತಾದ ಕನ್ನಡ ಟೆಕ್ಸ್ಟ್ ಬುಕ್.

# KANNADA TEXT

FOR

THE LOWER SECONDARY EXAMINATION
OF 1897.

FIRST EDITION 3,000 COPIES.

MYSORE:

GOVERNMENT BRANCH PRESS,

1896.

# ವಿಷಯಾನುಕ್ರಮಣಿಕೆ.


| | ಪುಟಗಳು. |
|---|---|
| ೧. ರಾಜಶೇಖರ ಚರಿತ್ರೆ .. .. .. | 1—117 |
| ೨. ಶ್ರೀರಾಮಾಭ್ಯುದಯ ಕಥಾಕುಸುಮಮಂಜರಿ .. | 1—17 |
| ೩. ಸುಮತಿ ಶತಕ .. .. .. | 19—27 |

# ಶುದ್ಧಿಪತ್ರ.

ರಾ ಜ ಶೇ ಖ ರ ಚ ರಿ ತ್ರೆ.

| ಪುಟ. | ಪಙ್ತಿ. | ಅಶುದ್ಧ. | ಶುದ್ಧ. |
|---|---|---|---|
| 18 | 15 | ಸಲ್ಪ | ಸ್ವಲ್ಪ |
| 21 | 13 | ಮುಸುರೆ | ಮುಸರೆ |
| 39 | 6 | ಬತ್ತ | ಬತ್ಯ |
| ,, | 25 | ಬರುಡೆ | ಬುರುಡೆ |
| 40 | 8 | ಭೈವರ | ಭೈರವ |
| 66 | 9 | ಧಾಸವ | ಧಾವನ |
| 80 | 27 | ಹೂವುಗಳನ್ನು | ಹೂಗಳನ್ನು |
| 101 | 1 | ಮತಾಂ ದವರು | ಮುಂತಾದವರು |
| 104 | 6 | ದೆಶಿ | ದೆಸೆ |
| 107 | 24 | ಆದುದುರಿಂಚ | ಆದುದರಿಂದ |

ಶ್ರೀರಾಮಾಭ್ಯುದಯ ಕಥಾಕುಸುಮಮಂಜರಿ.

| | | | |
|---|---|---|---|
| 9 | 3 | ತದ್ಗಳನು | ತದ್ಗಿಳನು |

# ರಾಜಶೇಖರಚರಿತ್ರೆ.

## ಮೊದಲನೆಯ ಪ್ರಕರಣ.

ಧವಳಗಿರಿ—ದೇವಾಲಯವರ್ಣನೆ—ಗೋದಾವರಿಯ ಗಟ್ಟಿನಲ್ಲಿದ್ದ ಧರ್ಮಶಾಲೆಯಲ್ಲಿ ಪ್ರಾತಃಕಾಲ ರಾಜಶೇಖರನು ಬಂದು ಕುಳಿತುಕೊಳ್ಳುವುದು—ಆಗ ಅಲ್ಲಿಗೆ ಬಂದ ಸಿದ್ಧಾಂತಿ ಮೊದಲಾದವರ ಸ್ತುತಿವಚನಗಳು—ಎಲ್ಲರೂ ಕೂಡ ರಾಮಪಾದಗಳ ಬಳಿಗೆ ಬೈರಾಗಿಯನ್ನು ನೋಡುವುದಕ್ಕೆ ಹೋಗುವುದು.

ಶ್ರೀನಾಸಿಕಾತ್ರ್ಯಂಬಕದಕಡೆ ಕಡುದೂರದಲ್ಲೆಲ್ಲೋ ಪಶ್ಚಿಮ
ದಲ್ಲೊಂದುನ್ನತಗೋತ್ರದಲ್ಲಿ ಜನನಹೊಂದಿ, ಊರ್ಮಿಕಾಕಂಕಣಾದಿ
ಗಳ ಮೆರುಗು ಹೊಳೆಯೆ ತನ್ನ ಜನನಕ್ಕೆ ಸ್ಥಾನವಾದ ಭೂಭೃದ್ವರ
ಪುರೋಭಾಗದಲ್ಲೇ ಹಳ್ಳಗಳಲ್ಲಿ ಬೀಳುತ್ತ ಏಳುತ್ತ ಕೊಂಚಕಾಲ
ವಿದ್ದು, ಆಮೇಲೆ ಮೆಲ್ಲಮೆಲ್ಲನೆ ಮುಂದುಮುಂದಕ್ಕೆ ಸಾಗಿ ಎಲ್ಲರ 5
ದೃಷ್ಟಿಗೆ ಚಂದವನ್ನು ತುಂಬುತ್ತ, ಅನಂತರ ಅವ್ಯಕ್ತಮಧುರಸ್ವನ
ಗಳಿಂದ ಮುದ್ದುಗುಲುಕುತ್ತ ಶರವೇಗದಿಂದೋಡುತ್ತ, ಬಳಿಕ ಘನತರು
ಗಳ ಬುಡವನ್ನು ಸೇರಿ ತಾಯಿಬೇರುಗಳನ್ನು ಬಿಟ್ಟು ಮಿಕ್ಕ ಬೇರು
ಗಳನ್ನು ಜಲ್ಲಿಸುತ್ತ ಹರಿದು ಜೊಂಡಿನಲ್ಲಡಗುತ್ತ ಹೊರಗೆ ಬರುತ್ತ
ಹೊರಟು, ವಿದರ್ಭಾದಿದೇಶಗಳ ಮಾರ್ಗವಾಗಿ ಪ್ರಯಾಣಮಾಡಿ ದಾರಿ 10
ಯುದ್ದಕ್ಕೂ ಬಂದು ಕೈಗೊಳ್ಳದವರದೇ ಲೋಪವೆಂಬಂತೆ ಸ್ನಾನ
ಪಾನಗಳಿಗೆ ಬಯಸಿದಷ್ಟು ನಿರ್ಮಲಜಲವನ್ನಿತ್ತು ಆಬಾಲವೃದ್ಧರೆಲ್ಲರ
ನ್ನಾನಂದಪಡಿಸುತ್ತ, ತಾನಡಿಯಿಟ್ಟಕಡೆಯಲ್ಲೆಲ್ಲ ಸಸ್ಯಗಳಿಗೂ ಫಲವೃ
ಕ್ಷಗಳಿಗೂ ಜೀವನವಂಕೊಟ್ಟು ಅವನ್ನು ಫಲಪ್ರದಂಗಳಾಗಿ ಮಾಡುತ್ತ,
ತನ್ನ ತಂಪು ವ್ಯಾಪಿಸಿದಷ್ಟರವರೆಗೂ ಇರ್ಕಡೆಗಳ ನೆಲವನ್ನೆಲ್ಲಾ 15
ಎಳಸಾದ ಪಚ್ಚೆಹುಲ್ಲಿನಿಂದಲಂಕರಿಸಿ ಪಶುಗಣಗಳಿಗಾಹಾರವನ್ನು ಕಲ್ಪಿ
ಸುತ್ತ, ತಾನು ಬರುವುದನ್ನು ಕೇಳಿ ದೂರದಿಂದ ಹೊರಟು ಅಡವಿ

ಹಣ್ಣುಗಳನ್ನೂ ನವಿಲುಗಣ್ಣುಗಳನ್ನೂ ವಹಿಸಿ ಉಬ್ಬಿ ನಾನಾಮುಖ
ವಾಗಿ ತನ್ನನ್ನು ನೋಡಬರುವ ವರದ, ಮಂಜೀರ, ಪಿನ್ನಗಂಗ ಮೊದ
ಲಾದವರನ್ನಾದರಿಸಿ ಬಳಕೊಳ್ಳುತ್ತ, ಸ್ವಲ್ಪಸ್ವಲ್ಪವಾಗಿ ತನ್ನ ಗಭೀರ
ತೆಯನ್ನು ತೋರ್ಪಡಿಸುವ ನಾಥನನ್ನು ಹುಡುಕಿಕೊಂಡು ಬಂದು,
ಗೋದಾವರಿ ಯಾವಗಿರಿಯನ್ನು ದೂರದಿಂದ ವಿಲೋಕಿಸಿ ರಸೋತ್ತರ
ವಾಗಿ ಘೋಷಿಸುತ್ತ ಪಾದದೊಳ್ಬಿದ್ದು ಶಿಖರದಲ್ಲಧಿವಸಿಸುವ ಜನಾರ್ದ
ನಸ್ವಾಮಿಯ ದರ್ಶನವನ್ನು ಮಾಡಿಕೊಂಡು ಕೂಡಲೇ ಅಲ್ಲಿಂದ
ತನ್ನ ಶಾಖಾರೂಪಗಳಾದೆರಡು ಕೈಗಳನ್ನು ಚಾಚಿ ಸರಸತೆ ಮೀರೆ
ನಾಥನನ್ನು ಸೇರುವ ಭಾಗ್ಯವನ್ನು ಹೊಂದಿದಳೋ ಆಧವಳಗಿರಿ ಆಂಧ್ರ
ದೇಶಕ್ಕಲಂಕಾರಭೂತವಾಗಿ ರಾಜಮಹೇಂದ್ರವರಪುರಸಮೀಪದಲ್ಲಿ ಮೆರೆ
ಯುತಿತ್ತು.

ಆಪರ್ವತವಷ್ಟೆತ್ತರವಲ್ಲದುದಾದರೂ, ಬಿಳಿಯ ಹಿಟ್ಟುಗಲ್ಲುಗ
ಳಿಂದ ತುಂಬಿರುವುದರಿಂದ ನೋಡುವುದಕ್ಕೆಷ್ಟೋ ರಮ್ಯವಾಗಿರುವುದು ;
ಈ ಕಲ್ಲುಗಳಿಂದಲೇ ಅದಕ್ಕೆ ಧವಳಗಿರಿಯೆಂಬ ನಾಮವು ಸಾರ್ಥಕವಾಗಿ
ರುವುದು. ದಕ್ಷಿಣದಕಡೆ ಬುಡದಿಂದ ಪರ್ವತಾಗ್ರದವರೆಗೂ ಅಂದ
ವಾದ ಕರಿಯಕಲ್ಲಿನ ಸೋಪಾನಗಳು ಕಟ್ಟಲ್ಪಟ್ಟಿರುವುವು. ಆಸೋ
ಪಾನಗಳಿರ್ಕಡೆಯಲ್ಲಿ ಬೆಟ್ಟದುದ್ದಕ್ಕೂ ಸಾಲ್ಗೊಂಡಿರುವ ಅರ್ಚಕರ
ಮನೆಗಳೂ ತದಿತರವೈಷ್ಣವಸ್ವಾಮಿಗಳ ಗೃಹಗಳೂ ಕಣ್ಗೆ ಆನಂದ
ವನ್ನುಂಟುಮಾಡುತ್ತಿರುವುವು. ಆಸೋಪಾನಗಳಿಂದ ಬೆಟ್ಟದಮೇ
ಲಕ್ಕೆ ಹತ್ತಿದರೆ ಅಲ್ಲಿ ಕರಿಯಕಲ್ಲುಗಳಿಂದ ಕಟ್ಟಲ್ಪಟ್ಟ ಸುಂದರವಾದ
ಚಿಕ್ಕದೇವಾಲಯವೊಂದು ಕಾಣಬರುವುದು. ಅದರ ಸುತ್ತಲೂ
ಹೆಚ್ಚುಕಡಮೆಯಾಗಿ ಆಳುದ್ದದ ಪ್ರಾಕಾರವು ಮೂರುಕಡೆಗಳಲ್ಲಿದ್ದಿ
ರುವುದು ; ಉತ್ತರದ ಕಡೆಯಲ್ಲಿಮಾತ್ರ ಗೋಡೆಗೆ ಬದಲಾಗಿ ಪರ್ವತ
ಶೃಂಗವೇ ಮೇಲಕ್ಕೆ ವ್ಯಾಪಿಸಿ, ತನ್ನ ಪಾದಗಳನ್ನಾಶ್ರಯಿಸಿರುವ
ಗೋಡೆಗಳಂ ಮೀರಿ ಆಲಯಶಿಖರವಂ ನಿಕ್ಕಿ ನೋಡುತ್ತಿರುವುದು.
ಪ್ರಾಕಾರದಲ್ಲೇ ಉತ್ತರದಕಡೆ ಒಂದು ಚಿಕ್ಕಗವಿಯಿರುವುದು. ಅದು
ಪೂರ್ವದಲ್ಲಿ ಪಾಂಡವರು ಅರಣ್ಯವಾಸಮಾಡುವಾಗ ಕುಳಿತು ತಪಸ್ಸು

ಮಾಡಿದ ಸ್ಥಳವೆಂದು ಹಿರಿಯರು ಹೇಳುವರು. ಅದರಲ್ಲಿ ಚಿಕ್ಕ ಶಿಲಾ
ವಿಗ್ರಹವೊಂದಿರುವುದು. ಸಂವತ್ಸರದವರೆಗೂ ಪೂಜಾನಮಸ್ಕಾರಗಳಿ
ಲ್ಲದೆ ಬೂಜು ಹಿಡಿದಿರುವಾದೇವರನ್ನು ಉತ್ಸವದಿನಗಳಲ್ಲಿ ಅರ್ಚಕ
ನೊಬ್ಬನು ಹೊರಕ್ಕೆ ತೆಗೆದು ಪುಲಕಾಪುಮಾಡಿ ಆಸ್ವಾಮಿಯ ಸನ್ನಿ
ಧಾನದಲ್ಲೊಂದು ದೀಪವಂ ಹತ್ತಿಸಿ, ಗುಹಾಮುಖದೊಳ್ತಾನು ನಿಂತು,
ಹಳ್ಳಿಗಳಿಂದ ಗುಂಪುಗುಂಪಾಗಿ ಬಂದ ಯಾತ್ರಾರ್ಥಿಗಳಿಂದ ತಲೆಗೊಂದು
ದುಡ್ಡಿನಮೇರೆ ಕಾಣಿಕೆಯಂ ತೆಗೆದುಕೊಂಡು ಒಳಕ್ಕೆ ಕರೆದುಕೊಂಡು
ಹೋಗಿ ದೇವತಾದರ್ಶನಮಾಡಿಸಿ, ಅವರ ಹಿರಿಯರು ಧನ್ಯರಾದರೆಂದು
ಹೇಳಿ, ಕಳುಹುತ್ತಿರುವನು. ಜನಾರ್ದನಸ್ವಾಮಿಯ ಕಲ್ಯಾಣದಿನ
ಗಳು ನಾಲ್ಕೂ ಕಳೆದಕೂಡಲೆ, ಎಂದಿನಂತೆ ಸ್ವಾಮಿಯ ರಥದ ಹೊರ
ಜೆಗಳನ್ನು ಅಲ್ಲಿ ಗುಡ್ಡೆಹಾಕಿ ಅದಕ್ಕಾಚಿಕ್ಕದೇವರನ್ನು ಕಾವಲಿಟ್ಟು,
ಜೀತಬತ್ಯಗಳಿಲ್ಲದೆ ಹೋದರೂ ರಾತ್ರಿಯೂ ಹಗಲೂ ಕಾಲುಕದಲಿಸದೆ
ಸ್ಥಿರವೃತ್ತಿಯಿಂದ ಕಾಯುತ್ತಿರುವಾಚಿಕ್ಕದೇವರಲ್ಲಿರುವ ವಿಶ್ವಾಸದಿಂದ,
ಪೂಜಾರಿಗಳು ಮುಂದಿನ ಸಂವತ್ಸರ ಆಹಗ್ಗಗಳ ಕೆಲಸ ಬರುವವ
ರೆಗೂ ಆಗುಹೆಯಂ ತುಳಿದು ಕೂಡ ನೋಡುವಕ್ಕರೆಯಿಲ್ಲದೆ ನಿರ್ವಿಚಾ
ರರಾಗಿರುವರು. ಈ ಪ್ರಕಾರ ಮನುಷ್ಯರು ಭಕ್ತಿಹೀನರಾಗಿ ದೇವತಾ
ಸಂದರ್ಶನಮಾಡಿಕೊಳ್ಳದೆ ಹೋದರೂ ಪರ್ವತವನ್ನು ಗುರುತಿಟ್ಟು
ಕೊಂಡಿದ್ದ ಚಿಕ್ಕ ಚತುಷ್ಪಾದಜಂತುಗಳುಮಾತ್ರ ವಿಶೇಷಭಕ್ತಿಯುಳ್ಳ
ವಾಗಿ ನಿತ್ಯವೂ ಆಸ್ವಾಮಿಯ ಸಂದರ್ಶನಮಾಡುತ್ತ, ಉತ್ಸವ ದಿನಗ
ಳಲ್ಲಿ ಮನುಷ್ಯರು ಬಂದು ತಮ್ಮನ್ನಟ್ಟಿಬಿಡುವಷ್ಟು ಪಾಪವಂ ಕಟ್ಟಿ
ಕೊಳ್ಳುವವರೆಗೂ ದೇವತಾಸಾನ್ನಿಧ್ಯದಲ್ಲಿ ಬರಿಯ ನೆಲದಮೇಲೆಯೇ
ಶಯನಿಸುತ್ತಿರುವುವು. ಮೂಡಲುಗಡೆ ಪ್ರಾಕಾರದಲ್ಲಿಯೇ ಜನಾರ್ದ
ನಸ್ವಾಮಿಗಿದಿರಾಗಿ ದೊಡ್ಡ ಧ್ವಜಸ್ತಂಭವೊಂದಿರುವುದು. ಅದರ ಶಿಖ
ರದಲ್ಲಿನ ಚಿಕ್ಕ ಘಂಟೆಗಳು ಗಾಳಿಗೆ ಕದಲುತ್ತ ಸದಾ ಶ್ರಾವ್ಯನಾದದಿಂದ
ಕಿವಿಗಳಂ ದಣಿಸುತ್ತಿರುವುವು. ಆಸ್ತಂಭದೊಂದುಕಡೆ ಆಂಜನೇಯ
ವಿಗ್ರಹವೊಂದು ಕೈಗಳಂ ಜೋಡಿಸಿಕೊಂಡು ಸ್ವಾಮಿಗಭಿಮುಖವಾಗಿ
ನಿಂತಿರುವುದು. ಈಶಿಲಾವಿಗ್ರಹಕ್ಕೂ ಧ್ವಜಸ್ತಂಭಕ್ಕೂ ಉತ್ತರದಲ್ಲಿ

ಕಲ್ಯಾಣಮಂಟಪವೊಂದಿರುವುದು. ಸ್ವಾಮಿಯ ಕಲ್ಯಾಣದಿನಗಳಲ್ಲಿ ಉತ್ಸವವಿಗ್ರಹಗಳನ್ನಲ್ಲಿ ಬಿಜಯಮಾಡಿಸಿ, ಯಥಾವಿಧಿಯಾಗಿ ವಿವಾಹ ತಂತ್ರವೆಲ್ಲವನ್ನೂ ಮಹಾವೈಭವದಿಂದ ನಡೆಯಿಸುವರು.

ಪ್ರತಿಮಾಸದೆರಡುಪಕ್ಷಗಳಲ್ಲೂ ಮುಖಮಂಟಪದಲ್ಲಿ ಏಕಾದಶಿ ಯದಿವಸ ರಾತ್ರಿ ಹರಿಭಜನೆ ನಡೆಯುತ್ತಿರುವುದು. ಹರಿಭಕ್ತರು ತುಲಸೀಮಣಿಸರಗಳನ್ನು ಧರಿಸಿಕೊಂಡು, ದ್ವಾದಶೋರ್ಧ್ವಪುಂಡ್ರಗ ಳನ್ನು ಸ್ಫುಟವಾಗಿಟ್ಟುಕೊಂಡು, ಕರತಾಳಗಳೂ ಮೃದಂಗಗಳೂ ಧ್ವನಿಮಾಡುತ್ತಿರುವಲ್ಲಿ, ತಂಬೂರಿಗಳನ್ನು ಮಿಾಟುತ್ತ, ಗಟ್ಟಿಯಾಗಿ ತಮ್ಮ ಯಾವಚ್ಛಕ್ತಿಯಿಂದಲೂ "ನವನೀತಚೋರಾ" "ರಾಧಿಕಾ ಲೋಲಾ" "ಗೋಪಾಲಬಾಲಾ" ಮೊದಲಾದ ನಾಮಗಳಿಂದ ಇಷ್ಟ ದೇವತೆಯನ್ನು ಸಂಬೋಧಿಸುತ್ತ, ಮಧ್ಯೇಮಧ್ಯೇ ಗಂಟಲೊಣಗಿ ದಾಗ ಮೆಣಸಿನ ಕಾಳುಗಳನ್ನೂ ಬೆಲ್ಲದ ಚೂರುಗಳನ್ನೂ ಅಗಿಯುತ್ತ, ಕೃಷ್ಣಲೀಲೆಗಳನ್ನು ಹಾಡುತ್ತಿರುವರು. ತಲೆಗಳನ್ನು ತಿರುಗಿಸುತ್ತ ಭಕ್ತರು ತಮ್ಮ ಸತ್ವವೆಲ್ಲವನ್ನೂ ತೋರಿಸಿ ಕೈಬಲವಿದ್ದಷ್ಟೂ ಬಾರಿಸು ವುದರಿಂದ ಒಂದೊಂದುವೇಳೆ ಮದ್ದಳೆಗಳೂ ತಾಳಗಳೂ ಒಡೆದು ಹೋಗುವುದೂ ಉಂಟು. ದೇವತಾವೇಶದಿಂದ ಭಕ್ತರಲ್ಲೊಬ್ಬಿಬ್ಬರು ದೇಹಪರವಶರಾಗಿ ಎರಡುಮೂರು ನಿಮಿಷಗಳವರೆಗೂ ತಮ್ಮ ಹಿಂದಿ ರುವ ಸ್ತಂಭಗಳಿಗೆ ಒರಗಿಕೊಳ್ಳುವುದೂ ಉಂಟು. ಇಂತಹ ಭಕ್ತಿ ಮಾರ್ಗವನ್ನು ಸ್ವಲ್ಪವೂ ಅರಿಯದ ಅನ್ಯದೇಶೀಯರಿಗೆ ಮಾತ್ರ ಆಗ ಆಭಕ್ತರು ಮಾಡುವ ಚೇಷ್ಟೆಗಳು ಹುಚ್ಚುಚೇಷ್ಟೆಗಳಂತೆ ಕಾಣು ವುವಾದರೂ, ಜಾತ್ರೆನೋಡಬಂದ ಜನರು ಅವರೆಷ್ಟು ವಿಕಾರವಾಗಿ ಕೂಗುತ್ತ ಭಜನೆ ಮಾಡುವರೋ ಅಷ್ಟು ಪರಮಭಾಗವತೋತ್ತಮ ರೆಂದೆಣಿಸುವರು.

ಯಾರಾದರೂ ಮಧ್ಯಾಹ್ನದವೇಳೆ ಒಂದುಸಾರಿ ಕೊಂಚ ಶ್ರಮ ಪಟ್ಟು ಬೆಟ್ಟದ ಮೇಲಕ್ಕೆ ಹತ್ತಿ ನಾಲ್ಕು ಕಡೆಗಳಲ್ಲೂ ದೃಷ್ಟಿಸಿ ನೋಡಿದರೆ ಬಣ್ಣಬಣ್ಣದ ಮರಿಗಳು ಚಂಗುಚಂಗೆಂದು ತಮ್ಮ ಮುಂದೆ ದುಮುಕಾಡುತ್ತಿರೆ, ಮುಂಗಾಲನ್ನು ಮೇಲಕ್ಕೆತ್ತಿ ಬೆಟ್ಟದುದ್ದಕ್ಕೂ

ಪೊದೆಗಳ ಮೇಲಿನೆಲೆಗಳನ್ನು ಮೇಯುವ ಮೇಕೆಗಳೂ, ಪೂರ್ವ ದಕ್ಷಿ
ಣಗಳಲ್ಲಿ ಬಣವೆಹಾಕಿದಂತಿರುವ ತಾಳೆಯ ಗುಡಿಸೆಗಳನ್ನಣಕಿಸುವಂತೆ
ಮಧ್ಯೇಮಧ್ಯೇ ಎತ್ತರವಾಗಿರುವ ಒಂದೊಂದು ಹೆಂಚಿನ ಮನೆಯೂ,
ಉತ್ತರದಿಕ್ಕಿನಲ್ಲಿ ಮಂಚಿಗೆಗಳಮೇಲಿನಿಂದ ಹೊಲದ ಒಕ್ಕಲಿಗರು ಕೋ
ಎಂದು ಕೂಗುತ್ತ ಕವಣೆಗಲ್ಲುಗಳನ್ನು ಬೀರುತ್ತ ಬೆದರಿಸೆ, ನಾನಾ 5
ವಿಧವಾದ ಹಕ್ಕಿಗಳು ಹತ್ತಿರಿರುವ ತೋಪುಗಳಿಂದ ಹೊರಟು ಮಧುರ
ರುತಗಳಂ ಮಾಡುತ್ತ ಆಕಾಶಕ್ಕೆ ನೆಗೆಯುತ್ತ ಸಮಯಸಿಕ್ಕಿದಾಗ ತೆನೆ
ಗಳಂ ಮುರಿದು ಪರಚಿಕೊಂಡು ಹೋಗಿ ಗಿಡಗಳಮೇಲಿಟ್ಟುಕೊಂಡು
ತಿನ್ನುತಿದ್ದರೆ ನೋಡುವುದಕ್ಕೆ ಅಂದವಾಗಿರುವ ಹಲವು ವಿಧದ ಹಚ್ಚ
ನೆಯ ಪೈರುಗಳೂ, ಆಮೇಲ್ಗಡೆ ಇರುವ ವೃಕ್ಷಗಳ ನೆಳಲಲ್ಲಿ ಕುಳಿತು 10
ಕೊಳಲನ್ನು ತುಟಿಯಮೇಲಿಟ್ಟುಕೊಂಡು ಕರ್ಣರಸಾಯನವಾಗಿ ಪಾಡು
ವ ಗೋಪಬಾಲಕರ ಗಾನಕ್ಕೆ ಹೃದಯಗಳು ಕರಗಿ ಮೇವನ್ನು ಬಿಟ್ಟು
ಕರುಗಳೂಸಹಿತ ಕಿವಿಗಳನ್ನೆತ್ತಿ ಕತ್ತುಗಳನ್ನು ಚಾಚಿ ಆಲಿಸು
ತ್ತಿರೆ ನಡುನಡುವೆ ಹುಲ್ಲುಕಡ್ಡಿಗಳನ್ನು ಕಡಿಯುತ್ತ ಬಯಲಲ್ಲಿ ನಿಂತಿ
ರುವ ಪಶುಗಣಗಳೂ, ಪಡುವಲಲ್ಲಿ ನೀಲಗಳಂತಿರುವ ತಿಳಿನೀರಿನ ಮೇಲೆ 15
ಸೂರ್ಯಕಿರಣಗಳು ಬಿದ್ದು ಎಲ್ಲಕಡೆಗಳಲ್ಲೂ ವಜ್ರದ ಥಾಳಥಳ್ಯವನ್ನು
ಹುಟ್ಟಿಸೆ ಬಲುತೆರದೊಳು ಜಲವಿಹಂಗಗಳು ಪುಟಚೆಂಡುಗಳಂತೆ
ಮೀನುಗಳಂ ಹಿಡಿಯುವುದಕ್ಕಾಗಿ ನೀರಲ್ಲಿ ಬಿದ್ದು ಏಳುತ್ತ ಪ್ರವಾಹ
ದೊಡನೆ ಹೋಗುತ್ತಿರೆ ಎಸೆಯುವ ಅಖಂಡಗೌತಮಿಯೂ, ನೇತ್ರೋ
ತ್ಸವವನ್ನು ಮಾಡುತ್ತಿರುವುವು. 20

ಆಪರ್ವತಪಾದದ ಹತ್ತಿರ ಗೋದಾವರಿಯ ದಡದಲ್ಲಿ ಕರಿಯ
ಕಲ್ಲುಬಂಡೆಯಮೇಲೆ ಅಂದವಾಗಿ ಕೆತ್ತಿದ ರಾಮಪಾದಗಳೆರಡು ಒಪ್ಪು
ತ್ತಿರುವುವು; ಪೂರ್ವಕಾಲದಲ್ಲಿ ಶ್ರೀರಾಮದೇವರು ಸೀತಾಲಕ್ಷ್ಮಣ
ರೊಡನೆ ಪರ್ಣಶಾಲೆಗೀಪರ್ವತಮಾರ್ಗವಾಗಿ ನಡೆದಂದಿನ ಪಾದಚಿಹ್ನೆ
ಗಳೇ ಇವು ಎಂದೆಲ್ಲರೂ ನಂಬಿರುವರು. ಆದಕಾರಣ ಈರಾಮಪಾದ 25
ಗಳನ್ನು ಸಂದರ್ಶಿಸಬೇಕೆಂಬಭಿಲಾಷೆಯಿಂದ ದೂರದೇಶಗಳಿಂದಲೂ ಯಾ
ತ್ರಾಪರರು ಬಂದು ರಾಮಪಾದಕ್ಷೇತ್ರದಲ್ಲಿ ಅಖಂಡಗೌತಮೀಸ್ನಾನ

ಮಾಡಿ ಬೆಟ್ಟದ ಮೇಲಕ್ಕೆ ಹತ್ತಿ ಶ್ರೀಜನಾರ್ದನಸ್ವಾಮಿಯವರ ದರ್ಶ
ನಮಾಡಿಕೊಂಡು ಶಕ್ತ್ಯನುಸಾರವಾಗಿ ದಕ್ಷಿಣೆಗೊಡಿ ಫಲಗಳನ್ನು
ಸಮರ್ಪಿಸಿ, ಹಣಗಾರರಾದರೆ ಸ್ವಾಮಿಗೆ ಉತ್ಸವಮಾಡಿಸಿ, ಹೊರಟು
ಹೋಗುತ್ತಿರುವರು. ಅದು ದಿವ್ಯಕ್ಷೇತ್ರವಾದುದರಿಂದ ಜಾತಿಮತ
5 ಭೇದವಿಲ್ಲದೆ ಎಲ್ಲರೂ ಪುಳಿಯೋಗರ, ದಧ್ಯೋದನ ಮೊದಲಾದ
ಸ್ವಾಮಿಪ್ರಸಾದವನ್ನು ಸ್ವೀಕರಿಸಿ, ಕಣ್ಣಿಗೊತ್ತಿಕೊಂಡು ಅಲ್ಲಿಯೇ
ತಿಂದು, ಕೈಯಲ್ಲಂಟಿಕೊಂಡಿರುವುದನ್ನು ತೊಳೆದುಕೊಂಡರೆ ಅಪಚಾ
ರವಾಗುವುದಾದುದರಿಂದ, ಕರತಲಗಳನ್ನು ಮೇಲಕ್ಕೆತ್ತಿ ಕೈಗೆಟುಕು
ವವರೆಗೂ ದೇವಾಲಯದ ಸ್ತಂಭಗಳಿಗೂ ಗೋಡೆಗಳಿಗೂ ಬಣ್ಣ
10 ಹಾಕುವುದೇ ಅಲ್ಲದೆ ತಚ್ಛೇಷದಿಂದ ತಮ್ಮ ಮುಂಗೈಗಳಿಗೂ ಬಟ್ಟೆ
ಗಳಿಗೂ ಮೆರುಗಿಟ್ಟುಕೊಳ್ಳುತ್ತಿರುವರು.

ಆಬೆಟ್ಟದಿಂದ ದಕ್ಷಿಣಕ್ಕೂ ಪೂರ್ವಕ್ಕೂ ಗ್ರಾಮವು ವಿಸ್ತರಿ
ಸಿರುವುದು. ಪೂರ್ವಕಾಲದಲ್ಲಿ ಪರ್ವತದ ಹೆಸರೇ ಗ್ರಾಮಕ್ಕೂ ಇತ್ತು.
ಆದರೆ ಈಚೆಗೆ ಗ್ರಾಮವನ್ನು ಧವಳೇಶ್ವರವೆಂದು ವ್ಯವಹರಿಸುತ್ತಾರೆ.
15 ಬೆಟ್ಟದ ಮೇಲಿನಿಂದ ಸೋಪಾನಗಳನ್ನಿಳಿದು ಬಂದ ಕೂಡಲೆ ರಾಜಬೀ
ದಿಯ ಆಚೆಯಕಡೆ ಶ್ರೀ ಅಗಸ್ತ್ಯೇಶ್ವರಸ್ವಾಮಿಯವರಾಲಯವೊಂದು
ಲೋಚನಗೋಚರವಾಗುವುದು. ಹಿಂದೆ ವಿಂಧ್ಯಪರ್ವತದ ಗರ್ವವ
ನ್ನಡಗಿಸಿ ದಕ್ಷಿಣಾಭಿಮುಖವಾಗಿ ಹೋಗುತ್ತಾ ಅಗಸ್ತ್ಯರು ಆಸ್ವಾಮಿ
ಯನ್ನಲ್ಲಿ ಪ್ರತಿಷ್ಠೆಮಾಡಿದರೆಂದು ಸ್ಥಳಪುರಾಣವು ಹೇಳುತ್ತದೆ. ಈ
20 ದೇವಾಲಯಕ್ಕೂ ಪರ್ವತಕ್ಕೂ ಮಧ್ಯೇ ಪೂರ್ವದಿಂದ ಪಶ್ಚಿಮಕ್ಕೆ
ಗೋದಾವರಿಯವರೆಗೂ ವಿಶಾಲವಾದ ರಾಜಬೀದಿಯೊಂದಿರುವುದು. ಆ
ಬೀದಿಯ ಕೊನೆಯಲ್ಲಿ ನೀರಿನವರೆಗೂ ಕರಿಯಕಲ್ಲಿನ ಸೋಪಾನಗಳು
ಕಟ್ಟಲ್ಪಟ್ಟಿರುವುವು. ಸೋಪಾನಗಳಿಗೆ ಸಮೀಪದಲ್ಲಿ ಬೀದಿಗೆ ಪೂರ್ವದ
ಕಡೆ ಧರ್ಮಛಾವಣಿಯೆಂಬೊಂದು ಮಂಟಪವಿರುವುದು. ಅದು
25 ಮಾರ್ಗಸ್ಥರು ರಾತ್ರಿ ತಂಗುವುದಕ್ಕಾಗಿ ಮೊದಲು ಕಟ್ಟಲ್ಪಟ್ಟುದಾದರೂ
ಆಗ ಗ್ರಾಮದ ದೊಡ್ಡಮನುಷ್ಯರು ಬೇಸರವನ್ನು ಹೋಗಲಾಡಿಸಿ
ಕೊಳ್ಳುವುದಕ್ಕೋಸ್ಕರ ಪ್ರತಿದಿನವೂ ಉದಯಾಸ್ತಮಯಕಾಲಗಳಲ್ಲಿ

ಸಭೆಸೇರಿ ಇಷ್ಟಕಥಾಗೋಷ್ಠಿಯಿಂದ ಕಾಲಕಳೆಯುವುದಕ್ಕೆ ವಿನಿಯೋಗಿಸಲ್ಪಡುತ್ತಿತ್ತು.

ಒಂದಾನೊಂದುದಿನ ಸೂರ್ಯನುದಯಿಸಿ ಪ್ರಾಚೀಮುಖದಲ್ಲಿ ಕುಂಕುಮದ ಬೊಟ್ಟನಂದವನ್ನು ವಹಿಸಿ, ವೃಕ್ಷಾಗ್ರಗಳನ್ನು ಬಂಗಾರದ ನೀರು ಬಳಿದಂತೆ ಪ್ರಕಾಶಮಾಡುತ್ತಿದ್ದನು; ಗಿಡದಮೇಲಿನ ಗೂಡುಗಳಿಂದ ಪಕ್ಷಿಗಳು ಕಲಕಲಧ್ವನಿಯೊಂದಿಗೆ ಹೊರಟು ನಾನಾಮುಖವಾಗಿ ಹಾರುತ್ತಿದ್ದುವು; ದನಕಾಯುವ ಹುಡುಗರು ತಂಗಳುಬುತ್ತಿ ಕಟ್ಟಿಕೊಂಡು ದನದ ಮಂದೆಗಳನ್ನು ಅಟ್ಟಿಕೊಂಡು ಹುಲ್ಲುಗಾವಲುಗಳ ಕಡೆಗೆ ಹೋಗುತ್ತಿರುವಲ್ಲಿ, ಹಿಂದುಗಡೆ "ಬಿಳೀಹಸುವಿನ ಸಗಣಿ ನಂದು," "ದೊಡ್ಡೆಮ್ಮೇ ಸಗಣಿ ನಂದು" ಎಂದು ಗೂಡೆಗಳನ್ನು ಹಿಡಿದುಕೊಂಡು ಹುಡುಗಿಯರು ಓಡುತ್ತ ಒಬ್ಬರಮೇಲೊಬ್ಬರು ಬೀಳುತ್ತಿದ್ದರು. ಒಕ್ಕಲಿಗರು ನೇಗಿಲುಗಳನ್ನು ಭುಜದಮೇಲಿಟ್ಟುಕೊಂಡು ಎತ್ತುಗಳನ್ನು ಹಿಡಿದುಕೊಂಡು ಹೊಲಗಳಿಗೆ ಹೋಗುತ್ತಿದ್ದರು. ಆಗ ಕಾಯಪುಷ್ಟಿಯುಳ್ಳ ಒಬ್ಬ ದೊಡ್ಡಮನುಷ್ಯನು ಜನಿವಾರವನ್ನು ನಿವೀತಿಹಾಕಿಕೊಂಡು ಎಡಗೈಯಲ್ಲಿ ಹಿತ್ತಾಳೆಯ ಚೆಂಬೊಂದನ್ನು ಹಿಡಿದುಕೊಂಡು, ಗೋದಾವರಿಯಲ್ಲಿಳಿದು ಕೈಕಾಲ್ಗಳನ್ನು ತೊಳೆದುಕೊಂಡು ದಡಕ್ಕೆ ಬಂದು ಬಾಯಿಮುಕ್ಕಳಿಸಿ, ಯಜ್ಞೋಪವೀತವನ್ನು ಸವ್ಯವಾಗಿ ಹಾಕಿಕೊಂಡು, ಧರ್ಮಶಾಲೆಗೆ ಬಂದು, ಅಲ್ಲಿನ ಜಗಲಿಯಮೇಲೆ ಕುಳಿತುಕೊಂಡು, ತಾನು ಬರುವಾಗ ಚೆಂಬಿನಲ್ಲಿ ಹಾಕಿಕೊಂಡು ತಂದಿದ್ದ ಜಾಲಿಕಡ್ಡಿಯಿಂದ ದಂತಧಾವನಮಾಡಿಕೊಳ್ಳುತ್ತಿದ್ದನು. ಆತನಿಗೆ ವಯಸ್ಸು ನಾಲ್ವತ್ತು ಸಂವತ್ಸರಗಳುಂಟು; ಮುಖದಮೇಲೆ ಸ್ಫೋಟಕದ ಮಚ್ಚೆಗಳುಮಾತ್ರ ಇಲ್ಲದಿದ್ದರೆ ಮುಖವು ಸುಂದರವಾದುದೆನ್ನುವುದಕ್ಕೆ ಸಂದೇಹವಿಲ್ಲ; ಆದುದರಿಂದಲೇ ಆತನನ್ನು ನಿತ್ಯವೂ ದರ್ಶಿಸುವುದಕ್ಕೆ ಬರುವ ಪ್ರವಕ್ತರ ಸ್ತೋತ್ರಗಳಿಗೆಂದಿಗೂ ಪಾತ್ರವಾಗದಿರಲಿಲ್ಲ; ಶರೀರಚ್ಛಾಯೆ ಕೆಂಪು; ವಿಗ್ರಹವು ಸ್ವಲ್ಪ ಸ್ಥೂಲವಾಗಿಯೂ ಗಿಡ್ಡಾಗಿಯೂ ಇರುವುದು; ಹಣೆ ವಿಶಾಲವಾಗಿ, ನೋಡುವವರಿಗೆ ಆತನು ಪಂಡಿತನೆಂದು ತೋರ್ಪ

ಡಿಸುತ್ತಿರುವುದು ; ಆಗ ಆತನುಟ್ಟುಕೊಂಡಿದ್ದುದು ಉಗುರಂಚಿನ
ನೀರ್ಗಾವಿಧೋತ್ರ ; ಸರಿಗೆಯಂಚಿನ ಬಂದು ಶುಭ್ರವಸ್ತ್ರವು ಶಿರಸ್ಸಿಗೆ
ಸಡಿಲವಾಗಿ ಕಟ್ಟಲ್ಪಟ್ಟು ಕೊನೆಮಾತ್ರ ಸ್ವಲ್ಪ ಜೋಲಾಡುತ್ತಿರು
ವುದು ; ಕಿವಿಗಳಲ್ಲಿದ್ದ ವಜ್ರದ ಹತ್ತುಕಡುಕೂ, ಕರ್ಮಿಷ್ಠನೆಂಬುದಕ್ಕೆ
5 ಸಾಕ್ಷ್ಯಕೊಡುತಿದ್ದ ಬಲಗೈಯನಾಮಿಕೆಯಲ್ಲಿನ ಚಿನ್ನದ ಪವಿತ್ರಧುಂ
ಗುರವೂ ತರ್ಜನಿಯ ಬೆಳ್ಳಿಯುಂಗುರಗಳೂ ಹೊರತು ಶರೀರದಲ್ಲಿ
ಆಭರಣಗಳೇನೂ ಇರಲಿಲ್ಲ ; ಆತನ ಹೆಸರು ರಾಜಶೇಖರ. ಆತನ
ಮುಖಪ್ರಕ್ಷಾಳನವಾಗುವ ಹೊತ್ತಿಗೆ ಗ್ರಾಮದಲ್ಲಿನ ಗೃಹಸ್ಥರು
ನಾಲ್ವರು ಅಲ್ಲಿಗೆ ಬಂದು ಅವರವರ ತಾರತಮ್ಯಗಳಿಗರ್ಹವಾಗಿ ಆತನು
10 ಮರ್ಯಾದೆಗಳಂ ಮಾಡಿ ಕುಳಿತುಕೊಳ್ಳಿರೆಂದು ಕೈತೋರಿಸಲು,
'ಚಿತ್ತ, ಚಿತ್ತ,' 'ನೀವು ದಯಮಾಡಿ' ಎನ್ನುತ್ತ ಚಾವಡಿಯತುಂಬ
ಕುಳಿತುಕೊಂಡರು.

ಆಗ ರಾಜಶೇಖರನು—"ಸಿದ್ಧಾನ್ತಿಯವರೇ! ನೀವು ನಾಲ್ಕು
ದಿನಗಳಿಂದ ದರ್ಶನಕೊಡುವುದನ್ನು ಶುದ್ಧಾಂಗವಾಗಿ ಬಿಟ್ಟಿರಿ ; ನಿಮ್ಮ
15 ಮನೆಯಲ್ಲಿ ಹಿರಿಯರೂ ಕಿರಿಯರೂ ಎಲ್ಲರೂ ಮತ್ತೇನೂ ಇಲ್ಲದೆ
ಸುಖವಾಗಿದಾರಷ್ಟೆ!"

ಸಿದ್ಧಾನ್ತಿ—"ಚಿತ್ತ, ಚಿತ್ತ, ತಮ್ಮನುಗ್ರಹದಿಂದ ನಾವೆಲ್ಲರೂ
ಸುಖವಾಗಿಯೇ ಇದೇವೆ ; ಎಷ್ಟು ಕುಟುಂಬಗಳನ್ನಾದರೂ ಅನ್ನ
ವಸ್ತ್ರಾದಿಗಳಂ ಕೊಟ್ಟು ಕಾಪಾಡಲುಳ್ಳ ಪ್ರಭುರತ್ನವಾದ ತಾವು
20 ಈಗ್ರಾಮದಲ್ಲಿರುವಾಗ ನಮ್ಮಂತಹ ಬಡವರಿಗೇನು ಕೊರತೆ? ನಮ್ಮ
ಗ್ರಾಮವು ಮಾಡಿದ ಪುಣ್ಯದಿಂದಲೂ ನಮ್ಮ ಪುರಾಕೃತಪುಣ್ಯದಿಂದಲೂ
ತಮ್ಮಂತಹ ದಾನಕರ್ಣರು ನಮ್ಮ ಗ್ರಾಮಕ್ಕೆ ಬಿಜಯಮಾಡಿಸಿರುವಿರ
ಲ್ಲದೆ ಮತ್ತೆ ಬೇರೆಯಿಲ್ಲ" ಎಂದು ಹೇಳಿ ರಾಮಶಾಸ್ತ್ರಿಯವರಕಡೆ
ತಿರುಗಿ: "ನಾವು ಅವರಿದಿರಿಗೆ ಸ್ತುತಿಮಾಡಬಾರದು ; ರಾಜಶೇಖ
25 ರರು ಕೇವಲ ಈಶ್ವರಾಂಶಸಂಭೂತರು ಸ್ವಾಮಿ."

ಆಮಾತುಗಳನ್ನಾದರಿಸಿ, ರಾಮಶಾಸ್ತ್ರಿಯು ಮಂದಹಾಸದಿಂದ,
"ಅದಕ್ಕೆ ಸಂದೇಹವೇನು! ಈ ಸಂಗತಿ ನೀವು ನನಗೆ ಹೇಳಬೇಕೇ?

ಅವರೀಗ್ರಾಮದಲ್ಲಿರುವುದರಿಂದ ನಾವೆಲ್ಲರೂ ಅವರ ನೆಳಲಲ್ಲಿ ನಿಂತಿರುವರಾಗಿದೇವೆ; ಇಲ್ಲದಿದ್ದರೆ ಮನೆಬಾಗಿಲುಗಳನ್ನು ಬಿಟ್ಟುಬಿಟ್ಟು ನಾವಿದುವರೆಗೆ ದೇಶಾಂತರಗತರಾಗಿ ಹೋಗಬೇಕಾಗುತ್ತಿರಲಿಲ್ಲವೇ? ಅವರ ತಂದೆಯವರಿಲ್ಲಿಗೆ ಬಂದಾಗಿನಿಂದ ಇದೊಂದು ಗ್ರಾಮವಾಗಿ ಕಾಣುತ್ತದಲ್ಲದೆ ಅದಕ್ಕೆ ಮೊದಲು ಈಯೂರಿಗೆ ನಾಮರೂಪಗಳಿದ್ದುವೇ?” ಎಂಬುದಾಗಿ ಹೇಳಿ ಒಳ್ಳೆಯಸಮಯ ಸಿಕ್ಕಿದಾಗ ತನ್ನ ಪಾಂಡಿತ್ಯವನ್ನು ಮರೆಮಾಡಬಾರದೆಂದು ಸಿದ್ಧಾನ್ತಿಯ ಸ್ತೋತ್ರಪಾಠಗಳಿಗೆ ಸಹಾಯವಾಗಿ ತಾನೂ ಕೆಲವನ್ನು ಸೇರಿಸಿದನು.

ಆಗ ರಾಜಶೇಖರನು ಮನಸ್ಸಿನಲ್ಲಿ ಬಹು ಸಂತೋಷಿಸಿದರೂ ಮೇಲಕ್ಕಾಸಂತೋಷವನ್ನು ತೋರ್ಪಡಿಸದೆ—“ಸಿದ್ಧಾನ್ತಿಯವರೇ! ಮೊನ್ನೆ ನಿಮ್ಮರಡನೆಯ ಹುಡುಗಿಗೇನೋ ಗ್ರಹಬಾಧೆ ಕಾಣಬಂದ ಹಾಗೆ ಕೇಳಿದೆನು; ಸ್ವಲ್ಪ ಗುಣವಾಗಿದೆಯೇ?” ಎಂಬುದಾಗಿ ಕೇಳಿದ ಕೂಡಲೆ ಸಿದ್ಧಾನ್ತಿ ಮುಖದಲ್ಲಿ ದೀನಭಾವವನ್ನು ತೋರಿಸುತ್ತ ಸ್ವಲ್ಪ ಆಲೋಚಿಸಿ ತಲೆದೂಗಿ, “ಜೋಯಿಸರ—ಕಾಮಾವಧಾನಿಗಳ ಕೈಯಲ್ಲಿ ವಿಭೂತಿಯಿಡಿಸುತ್ತಿದೇನೆ. ಆದರೂ ಅದರಿಂದಿದುವರೆಗೇನೂ ಗುಣ ಕಾಣಬರಲಿಲ್ಲ; ಜಾತಕರೀತಿಯಿಂದ ಅವಳಿಗೀಗ ಶನಿಕಾಟ; ಯಾವುದಕ್ಕೂ ಒಳ್ಳೆಯದೆಂದು ನನ್ನ ತಮ್ಮನಿಂದ ನವಗ್ರಹಜಪ ಮಾಡಿಸುತ್ತಿದೇನೆ; ಅಷ್ಟಕ್ಕೇ ಸುಮ್ಮನಿರದೆ ಕಾಮಾವಧಾನಿಯವರನ್ನೇ ‘ಪಂಚಮುಖವೀರ ಹನುಮಂತ ಮಂತ್ರವನ್ನು’ ಪುನಶ್ಚರಣೆ ಮಾಡಬೇಕೆಂದೂ, ಜಪಶಾಂತಿಗೇನಾದರೂ ಬೇಕಾಗಿದ್ದರೆ ಯಾವ ರಾಜಶೇಖರನನ್ನಾದರೂ ಕಾಲುಕಟ್ಟಿಕೊಂಡು ನಾಲ್ಕು ರೂಪಾಯಿಗಳನ್ನು ತಂದುಕೊಡುತ್ತೇನೆ, ಒಳ್ಳೆಯ ವಿಭೂತಿಯಿಡಿರೆಂದೂ, ಆತನನ್ನನುಸರಿಸಿ ಬೇಡಿಕೊಳ್ಳುತ್ತಿದೇನೆ. ಆದರಿಂದಲೇ ಈ ನಾಲ್ಕುದಿನಗಳಿಂದ ದರ್ಶನತೆಗೆದುಕೊಳ್ಳಲಿಲ್ಲ; ಇಲ್ಲದಿದ್ದರೆ ಯಾವುದು ಹೇಗಾದರೂ ನಾನು ತಮ್ಮ ದರ್ಶನವಂ ಬಿಡುವೆನೇ?”

ರಾಜಶೇಖರ—ಶಾಸ್ತ್ರಿಗಳೇ! ನೀವು ರೂಪಾಯಿಗಳ ನಿಮಿತ್ತ ಸಂಶಯಪಡಲವಶ್ಯಕವಿಲ್ಲ; ಬೇಕಾಗಿದ್ದರೆ ಆನಾಲ್ಕುರೂಪಾಯಿ

ಗಳನ್ನು ನಾನು ಕೊಡುವೆನು; ಇನ್ನೂ ನಾಲ್ಕುರೂಪಾಯಿ ಹೋ
ದರೂ ಚಿಂತೆಯಿಲ್ಲ, ಒಳ್ಳೆಯ ವೈದ್ಯನನ್ನು ವಿಚಾರಿಸಬೇಕು; ಈ
ಯೂರಿನಲ್ಲಿ "ಕಾವಣಾವಧಾನಿಗಳಗಿಂತ–" ಎಂದು ಆಕಾಶದಕಡೆ
ನೋಡಿ ಏನೋ ಆಲೋಚಿಸುತಿದ್ದನು. ಸಿದ್ಧಾನ್ತಿಯ ಸ್ತುತಿ ರಾಜಶೇಖ
5 ರನನ್ನು ಅಪೇಕ್ಷೆವಾಗಿ ಹಿಡಿದು ಸ್ವಲ್ಪವಾಗಿಯೋ ಹೆಚ್ಚಾಗಿಯೋ
ಧನರೂಪವಾದ ಪ್ರತಿಫಲವನ್ನು ತರುತ್ತ ಬರುವುದಲ್ಲದೆ ಇಂದಿನವರೆಗೆ
ಎಂದೂ ವ್ಯರ್ಥವಾಗಿ ಹೋಗಲಿಲ್ಲ.

ಧವಳೇಶ್ವರದಲ್ಲೂ ಸುತ್ತುಮುತ್ತು ಗ್ರಾಮಗಳಲ್ಲೂ ಬೇರೆ
ಸಿದ್ಧಾನ್ತಿಯಿಲ್ಲದಕಾರಣ, ಆತನ ಮನೆಗೆ ಸದಾ ಯಾರಾದರೂ ಬಂದು
10 ವರ್ಜ್ಯಕಾಲವು ಯಾವಾಗಲೆಂದಾಗಲಿ, ಪ್ರಯಾಣಕ್ಕೆ ಮುಹೂರ್ತವನ್ನಿ
ಟ್ಟುಕೊಡಿರೆಂದಾಗಲಿ, ಹೊಸಬಟ್ಟೆಯನ್ನುಟ್ಟುಕೊಳ್ಳುವುದಕ್ಕೆ ಯಾವ
ದಿನವೊಳ್ಳೆಯದೆಂದಾಗಲಿ, ಮನೆಗಟ್ಟುವುದಕ್ಕಾರಂಭಿಸಲು ಯಾವಮಾ
ಸವನುಕೂಲವಾದುದೆಂದಾಗಲಿ, ಕ್ಷೌರಮಾಡಿಸಿಕೊಳ್ಳುವುದಕ್ಕೆ ಯಾವ
ವಾರವೊಳ್ಳೆಯದೆಂದಾಗಲಿ, ವಿವಾಹಕ್ಕೆ ಲಗ್ನವಿಟ್ಟುಕೊಡಿರೆಂದಾಗಲಿ,
15 ರಜಸ್ವಲೆಯಾದಾಗ ನಕ್ಷತ್ರಹೇಳಿರೆಂದಾಗಲಿ, ಕೇಳ ಹೋಗುತ್ತಲೇ
ಇರುವರು. ದೂರಬಂಧುಗಳು ಹೋದಾಗ ಸೂತಕವೆಷ್ಟುದಿನವಿರಬೇ
ಕೋ ತಿಳಿಯಬೇಕಾದರೂ, ಕೆಟ್ಟ ನಕ್ಷತ್ರದಲ್ಲಿ ಯಾರಾದರೂ ಮೃತಿ
ಹೊಂದಿದಾಗ ಮನೆಬಿಟ್ಟೆಷ್ಟುದಿನಗಳು ಹೋಗಬೇಕೋ ತಿಳಿಯಬೇ
ಕೆಂದರೂ, ರೋಹಿಣ್ಯಾದಿ ನಕ್ಷತ್ರಗಳಲ್ಲಿ ಮಗು ಹುಟ್ಟಿದರೆ ಏನು
20 ಶಾಂತಿಮಾಡಬೇಕೋ ಅರಿಯಬೇಕೆಂದರೂ, ಸಿದ್ಧಾನ್ತಿಯನ್ನರಸಿಕೊಂ
ಡು ಬಾರದಿದ್ದರೆ ತೀರದು. ಯಾವ ಒಕ್ಕಲಿಗನ ದನ ತಪ್ಪಿಸಿಕೊಂಡು
ಹೋದರೂ, ಯಾರಮನೆಯಲ್ಲಿ ಯಾವವಸ್ತು ಹೋದರೂ, ಬಂದು
ಸಿದ್ಧಾನ್ತಿಯವರನ್ನು ಕೇಳದೆ ಹೋಗರು. ಇಂತಹ ಸಮಯಗಳ
ಲ್ಲೆಲ್ಲಾ ಆತನು ಬೀದಿಯಕಡೆ ನಡವೆಯಲ್ಲಿ ನೆಲದಮೇಲೆ ಮರಳು
25 ಹಾಕಿ ಅದರಲ್ಲಿ ಹಂಚಿಕಡ್ಡಿಯಿಂದ ಏನೇನೋ ಬೀಜಾಕ್ಷರಗಳನ್ನೂ
ಅಂಕೆಗಳನ್ನೂ ಬರೆದು ಮೇಲ್ಗಡೆ ನೋಡಿ ಆಲೋಚಿಸಿ ಬಂದಕಾರ್ಯ
ವಿದೆಂದೂ, ಕಾರ್ಯವೀಪ್ರಕಾರವಾಗುವುದೆಂದೂ ಹೇಳಿ ಕಳುಹುತ್ತಿರು

ವನು. ಆತನು ಹಲ್ಲಿಯಶಕುನಮುಂತಾದುವುಗಳನ್ನು ನೋಡಿ ಸಂತಾನವುಂಟಾಗುವ ಕಾಲವನ್ನೂ ಕೂಡ ಹೇಳುತ್ತಿದ್ದನು. ಸಾವಿರ ವೇಕೆ? ಸಿದ್ಧಾಂತಿಯ ಆಲೋಚನೆಯಿಲ್ಲದೆ ಆಪ್ರಾಂತದ ಗ್ರಾಮಂಗ ಳಲ್ಲಿ ಯಾವ ಶುಭಕಾರ್ಯವಾಗಲಿ ಅಶುಭಕಾರ್ಯವಾಗಲಿ ನಡೆಯದು. ಆತನು ಹೇಳುವ ಜ್ಯೋತಿಷವು ಬಹುಶಃ ಅಬದ್ಧವೇ ಆಗುತ್ತ ಬಂದ ರೂ ಆಗಾಗ ಕಾಕತಾಳನ್ಯಾಯವಾಗಿ ಕೆಲವು ಸಂಗತಿಗಳು ನಿಜವಾಗು ವುದೂ ಉಂಟಾದುದರಿಂದ ಜನರು ಆತನ ಮಾತು ಅಮೋಘವೆಂದು ನಂಬುತಲೇ ಇದ್ದರು.

ಆಗ ಆಚಾವಡಿಯಲ್ಲಿದ್ದವರಲ್ಲಿ ಯಾರೋ, "ಬೈರಾಗಿಗಳು ಭೂತವೈದ್ಯದಲ್ಲಿ ಗಟ್ಟಿಗರು" ಎಂದು ಮೆಲ್ಲನೆ ಹೇಳಿದರು. ಅಷ್ಟ ರಲ್ಲಿ ರಾಜಶೇಖರನು ಸಿದ್ಧಾಂತಿಯವರ ಕಡೆ ದೃಷ್ಟಿತಿರುಗಿಸಿ "ಅಹು ದು. ಬೈರಾಗಿಗಳು ಎಂದು ಹೇಳಿದಕೂಡಲೆ ಜ್ಞಾಪಕ ಬಂತು. ಈ ಗ್ರಾಮಕ್ಕೆ ಯಾವನೋ ಒಬ್ಬ ಬೈರಾಗಿ ಬಂದು ಹತ್ತುದಿನಗಳಿಂದ ಇಲ್ಲಿಯೇ ಇದ್ದಾನಂತೆ; ಆತನಿಗೆ ತೋರಿಸಬಾರದೇ? ಗೋಸಾಯಿ ಗಳಿಗೆ ಪರಮಹಂಸಕ್ರಿಯೆಗಳೂ ವನಮೂಲಿಕೆಗಳೂ ವಿಶೇಷವಾಗಿ ತಿಳಿದಿರುವುವು. ಅವರು ಎಂತಹ ಅಸಾಧ್ಯವಾದ ಪೀಡೆಗಳನ್ನಾದರೂ ಒಂದು ಚಿಟಿಕೆಯಲ್ಲಿ ಹೋಗಲಾಡಿಸುವರು" ಎಂದು ಹೇಳಿದಕೂಡಲೇ ಚಾವಡಿಯೆಲ್ಲಾ 'ಚಿತ್ತ', 'ವಾಸ್ತವ', 'ಹಾಗೆ ಮಾಡತಕ್ಕದೇ ಸರಿ' ಎಂಬ ಧ್ವನಿಗಳಿಂದ ತುಂಬಿಹೋಯಿತು. ಮಾತಾಡುವವರು ಧನವಂತರಾ ದರೆ ವ್ಯರ್ಥವಚನವೂ ಸ್ತುತಿಯೋಗ್ಯವಾಗದೆ ಇರದಷ್ಟೆ? ಆಮಾ ತುಗಳಿಂದುತ್ಸಾಹವುಂಟಾಗಿ ರಾಜಶೇಖರನು ಆಬೈರಾಗಿಯನ್ನು ತಾನು ನೋಡದಿದ್ದರೂ ಬ್ರಹ್ಮವರ್ಚಸ್ಸುಳ್ಳವನೆಂದು ಶ್ಲಾಘಿಸಿದನು.

ಅಷ್ಟರಲ್ಲಿ ಸಿದ್ಧಾಂತಿಯು ಮನಸ್ಸಿನಲ್ಲಿಲ್ಲದ ಸಂತೋಷವನ್ನು ಮುಖದಲ್ಲಿ ತಂದಿಟ್ಟುಕೊಂಡು ಬಂದುಮುಗುಳ್ನಗೆ ನಕ್ಕು ವಿನಯ ತೋರಿಸಲು ಕೈಗಳನ್ನು ಜೋಡಿಸಿ ರಾಜಶೇಖರನ ಮುಖದಲ್ಲಿಯೇ ದೃಷ್ಟಿನಿಲ್ಲಿಸಿ, "ತಮ್ಮ ಮಾತಿನಿಂದಲೇ ನಮ್ಮ ಹುಡುಗಿಯ ಬಾಧೆ ನಿವಾರಣವಾಯಿತು. ಅವಳ ಅದೃಷ್ಟ ಚೆನ್ನಾಗಿರುವುದರಿಂದಲೇ

ಸ್ವಾಮಿಮುಖದಿಂದ ಈಮಾತು ಬಂತು. ಈಗಲೇ ತಮ್ಮಪ್ಪಣೆಯ
ಪ್ರಕಾರ ಬೈರಾಗಿಯ ಬಳಿಗೆ ಹೋಗುತ್ತೇನೆ" ಎಂದು ಬಿನ್ನಹಮಾಡಿ
ಪ್ರಯಾಣೋನ್ಮುಖನಾಗಿ ಎದ್ದು ನಿಂತುಕೊಂಡನು. ರಾಜಶೇಖರನ
ಅಭಿಪ್ರಾಯ ಸ್ವಲ್ಪ ತಿಳಿದಕೂಡಲೇ, ಬೈರಾಗಿಯು ಮಹಾನುಭಾವ
5 ನೆಂದೂ, ಮಹಾಮಂತ್ರವೇತ್ತನೆಂದೂ, ವಾಯುಭಕ್ಷಣೆಮಾಡುವ
ನೆಂದೂ, ಉರಿಯುವ ಪಂಚಾಗ್ನಿಮಧ್ಯದಲ್ಲಿ ತಪಸ್ಸು ಮಾಡುವನೆಂದೂ
ಸಭೆಯೆಲ್ಲಾ ಆತನ ವಿಷಯವಾದ ಸ್ತುತಿಪಾಠದಲ್ಲಿಯೇ ಮುಳುಗಿಹೋ
ಯಿತು. ಯಾರನ್ನಾದರೂ ಬಳ್ಳೆಯವನೆಂದು ಒಬ್ಬ ದೊಡ್ಡಮನು
ಷ್ಯನು ಹೇಳಿದರೆ, ಅದರಮೇಲೆ ಯಾರ ವಾಕ್ಕು ತಾನೇ ಹುಟ್ಟೀತು?
10 ಯಾರಬಾಯಿತಾನೇ ಸ್ತುತಿವಾಕ್ಯಗಳಿಗೆ ತಡವರಿಸುವುದು?

ಆಗ ರಾಜಶೇಖರನು ಬೀದಿಯಕಡೆ ನೋಡಿ "ಯಾರೋ ಸ್ತ್ರೀ
ಯರು ನೀರಿಗೆ ಬಂದು ನಮ್ಮನ್ನು ನೋಡಿ ನಾಚಿಕೆಪಟ್ಟು ಹಿಂದಕ್ಕೆ
ನಾಲ್ಕುಹೆಜ್ಜೆಯಿಟ್ಟು ನಿಂತುಕೊಂಡು ಒಬ್ಬರೊಬ್ಬರ ಮುಖದಕಡೆ
ನೋಡಿಕೊಳ್ಳುತಿದ್ದಾರೆ; ನಾವೆಲ್ಲರೂ ಎದ್ದು ಬೈರಾಗಿಯನ್ನು ನೋಡಿ
15 ಬರೋಣ, ಬನ್ನಿ" ಎಂಬ ಮಾತನ್ನಾಡಿದಕೂಡಲೇ ಎಲ್ಲರೂ
ಎದ್ದು ಪ್ರಯಾಣೋನ್ಮುಖರಾಗಿ ನಿಂತುಕೊಂಡರು. ಕೂಡಲೇ
ಸರ್ವರೂ ಸೇರಿ ಉತ್ತರಮುಖವಾಗಿ ರಾಮಪಾದಗಳಕಡೆಗೆ ನಡೆಯ
ಲಾರಂಭಿಸಿದರು.

———

## ಎರಡನೆಯ ಪ್ರಕರಣ.

ರಾಜಶೇಖರನ ಮಗಳು ರುಕ್ಮಿಣಿ ಸ್ನಾನಕ್ಕೆ ಬರುವುದು—ನದೀತೀರ
ವರ್ಣನೆ—ರುಕ್ಮಿಣಿಗೂ ಸಿದ್ಧಾಂತಿಯ ಭಾರ್ಯೆಗೂ ನಡೆದ ಸಂಭಾಷಣೆ—
ನೀರಿಗೆ ಬಂದ ಹೆಂಗಸರ ಪ್ರಸಂಗಗಳು—ಪಂಚಾಂಗದಬ್ರಾಹ್ಮಣನು ಬಂದು
ಸಂಕಲ್ಪ ಹೇಳುವುದು—ರುಕ್ಮಿಣಿ ಸ್ನಾನಮಾಡಿ ಹೊರಡುವುದು.

ರಾಜಶೇಖರನು ಪರಿವಾರದೊಂದಿಗೆ ನಾಲ್ಕುಹೆಜ್ಜೆ ಮುಂ
20 ದಕ್ಕೆ ಸಾಗಿದಕೂಡಲೆ ಒಬ್ಬ ಸುಂದರಿ, ಸುಂದರಮಂದಗಮನದಿಂದ

ಪಾದಗಳಲ್ಲಿನ ಅಂದುಗೆಗಳ ಶಬ್ದ ಕಾಲುಂಗುರಗಳ ಶಬ್ದದೊಡನೆ
ಸೇರೆ, ನಡುವಿನಲ್ಲಿದ್ದ ಬೆಳ್ಳಿಯೊಡ್ಯಾಣದ ಕಾಂತಿಯೂ ಮುಂಗೈಗಳ
ಲ್ಲಿದ್ದ ಚಿನ್ನದ ಕಂಕಣಗಳ ಕಾಂತಿಯೂ ಬಳೆಗಳ ಕಾಂತಿಯೂ ಪ್ರತಿ
ಫಲಿಸಿ ಬಲಗೈಯಲ್ಲಿ ಥಳಥಳಿಸುತಿದ್ದ ತಾಮ್ರದ ಚೆಂಬಿಗೆ ಚಿತ್ರವರ್ಣ
ವಿಡೆ, ಮುಖದಲ್ಲಿ ಲಜ್ಜಾಭಯಗಳು ನಟಿಸೆ, ಮೇಲೆದೆಯ ಸೆರಗನ್ನು 5
ಸರಿಮಾಡಿಕೊಳ್ಳುತ್ತ ತಲೆಬಗ್ಗಿಸಿಕೊಂಡು, ಮೆಲ್ಲನೆ ಪಾವಟಿಗೆಗಳನ್ನಿ
ಳಿದು, ಚೆಂಬನ್ನು ನೀರಿನಕರೆಯಲ್ಲಿಟ್ಟು, ಚೆಂಬಿನ ಬಾಯಿಗೆ ಹತ್ತಿ
ಸಿದ್ದ ಅರಿಸಿನದುಂಡೆಯನ್ನು ತೆಗೆದು ಸ್ವಲ್ಪ ಅರೆದುಕೊಂಡು, ಮತ್ತೆ
ಗದೆಲೆಯಲ್ಲಿ ಸುತ್ತಿ ತಂದಿದ್ದ ಕುಂಕುಮದ ಪೊಟ್ಟಣವನ್ನೊಂದು ಬಟ್ಟೆ
ಯೊಗೆಯುವ ಕಲ್ಲಿನಮೇಲಿಟ್ಟು, ಮೊಣಕಾಲುದ್ದದ ನೀರಲ್ಲಿ ನಿಂತು 10
ಕೊಂಡಳು. ಆಕೆ ರಾಜಶೇಖರನ ಹಿರಿಯಮಗಳಾದ ರುಕ್ಮಿಣಿ—
ಆಹಾ! ಆಕೆಯ ಸೌಂದರ್ಯವನ್ನು ಪ್ರತ್ಯಕ್ಷದಲ್ಲಿ ನೋಡನೋಂತವರ
ಕಣ್ಣೇ ಕಣ್ಣು. ಆಕಾಲದಲ್ಲಿ ಹಿಂದೂದೇಶದಲ್ಲಿದ್ದ ಸುಂದರಿಯರಲ್ಲೆ
ಲ್ಲಾ ತೆನುಗುದೇಶದವರೇ ರೂಪರೇಖಾವಿಲಾಸಗಳಲ್ಲಸಮಾನರಾಗಿ
ದ್ದರು; ಅವರಲ್ಲಿಯೂ ಬ್ರಾಹ್ಮಣಜಾತಿಯ ಸ್ತ್ರೀಯರು ಅತ್ಯಂತ 15
ಸೌಂದರ್ಯವತಿಯರು. ಆದರೂ ರುಕ್ಮಿಣಿಯ ರೂಪವನ್ನು ನೆನೆದು
ಕೊಂಡಾಗಮಾತ್ರ ಆಸುಂದರಿಗಳು ಸೌಂದರ್ಯವತಿಗಳೆಂದು ಹೇಳುವು
ದಕ್ಕೆಲ್ಲರೂ ಸಂಕೋಚಪಡುವರು. ಜನರೆಲ್ಲರೂ ಬಹಳ ಸೌಂದರ್ಯ
ವತಿಗಳೆಂದೊಪ್ಪಿಕೊಂಡವರಲ್ಲಿ ಉತ್ತಮರನ್ನಾರಿಸಿ ಆಕೆಯ ಜತೆಯಲ್ಲಿ
ನಿಲ್ಲಿಸಿದರೆ ಅವರು ಕುರೂಪಿಗಳೆಂದೆನಿಸುವ ಆಕೆಯ ಮನೋಜ್ಞತ 20
ವನ್ನೇನೆಂದು ಕರೆಯಬೇಕೋ ತಿಳಿಯದು. ಅಪೂರ್ವವರ್ಣನಾಸಾ
ಮರ್ಥ್ಯವುಳ್ಳ ಕಾಳಿದಾಸಾದಿಕವಿಗಳಲ್ಲೊಬ್ಬರನ್ನಾದರೂ ಹೋಲಲಾ
ರದ ನಾನು, ಇದ್ದಷ್ಟು ಸೌಂದರ್ಯವನ್ನು ಬೋಧಿಸುವ ಪದಗಳಿಲ್ಲದ
ಭಾಷೆಯಲ್ಲಿ, ಪದಗಳು ಬೋಧಿಸುವಷ್ಟರವರೆಗಾದರೂ ಪೂರ್ಣವಾಗಿ
ತಿಳಿಸಲಾರದ ಬುದ್ಧಿಯಿಂದ, ವರ್ಣಿಸತೊಡಗುವುದು ಆಕೆಯ ಸೌಂದ 25
ರ್ಯದ ಗೌರವಕ್ಕೆ ಕೊರತೆಯನ್ನುಂಟುಮಾಡುವುದಲ್ಲವೆ? ಆದರೂ
ಯೋಗ್ಯವಸ್ತು ದೊರೆತಾಗ ವರ್ಣಿಸದೆ ಬಿಡುವುದು ಉಚಿತವಲ್ಲವಾದು

ದರಿಂದ, ಈಸೃಷ್ಟಿಯಲ್ಲಿನ ವಸ್ತುಗಳಲ್ಲಿ ಯಾವುದೊಂದಕ್ಕೆ ಹೋಲಿಸಿ ಈಪುಸ್ತಕವನ್ನೋದುವರಿಗೆ ಆಕೆಯ ಅವಯವಗಳ ರೂಪವನ್ನು ಸ್ವಲ್ಪ ಮನಸ್ಸಿಗೆ ಹಿಡಿಯುವಂತೆ ಮಾಡುವೆನೆಂದರೂ, ಆಕೆಯ ಅಂಗಗಳನ್ನೆಣಿಸಿ ಆವಸ್ತುಗಳ ಹೆಸರನ್ನು ಹೇಳುವುದಕ್ಕೇ ನಾಚಿಕೆಯಾಗುತ್ತಿದೆ. ಸಾವಿರವೇಕೆ? ಚತುರ್ಮುಖನು ಘುಣಾಕ್ಷರನ್ಯಾಯವಾಗಿ ಮಾಡಿದ ಆಕೆಯ ರೂಪಕ್ಕೆ ತಲೆದೂಗಿ, ತನ್ನ ಅಪೂರ್ವವಸ್ತುನಿರ್ಮಾಣಚಾತುರ್ಯವನ್ನು ಹೊಗಳಕೊಳ್ಳದೆ ಹೋಗನೆಂದು ಆಕೆಯನ್ನು ನೋಡಿದವರೆಲ್ಲರೂ ಎಣಿಸುತ್ತಿದ್ದರು. ಆಕೆಯ ಶರೀರಚ್ಛಾಯೆಯನ್ನು ನೋಡಿದರೆ ಈಭೂಮಂಡಲದಲ್ಲಿ ಬಂಗಾರಕ್ಕೇನು ಹೆಚ್ಚು ಬಣ್ಣವಿರುವುದೆಂದು ತೋರುವುದು; ಕಪ್ಪಾಗಿದ್ದರೆ, ಬಿಲ್ಲು ಆಕೆಯ ಕಣ್ಣ ಹುಬ್ಬುಗಳನ್ನು ಸ್ವಲ್ಪ ಹೋಲಿರುವುದೆಂದು ಹೇಳಬಹುದು; ನೇತ್ರಗಳನ್ನು ನೋಡಿದರೆ ಭಾಗ್ಯದೇವತೆ ಅವುಗಳಲ್ಲಿಯೇ ಬಕ್ಕಲಿರುವಂತೆ ಕಾಣುವುದು; ಆದರೆ ಚೆನ್ನಾಗಿ ಪರಿಶೀಲಿಸಿದಲ್ಲಿ ಯಾವುದೋ ಸ್ಥಿರ ವಿಚಾರವೊಂದು ಆಕೆಯ ಹೃದಯಪೀಠದಲ್ಲಿ ನೆಲೆಗೊಂಡಿರುವಂತೆ ಮುಖಲಕ್ಷಣಗಳು ಸೂಚಿಸುತ್ತಿರುವುವು. ಆವಿಚಾರಕ್ಕೆ ಕಾರಣವಿಲ್ಲದೆ ಹೋಗಲಿಲ್ಲ—ಆಕೆಯ ಗಂಡನು ಸಹವಾಸದೋಷದಿಂದ ಆರುತಿಂಗಳ ಕೆಳಗೆ ತಾಯಿತಂದೆಗಳಿಗೆ ಹೇಳದೆ ದೇಶಾಂತರ ಹೋಗಿದ್ದನು.

ಈಗ ಆಕೆಗೆ ಹದಿನಾಲ್ಕು ಸಂವತ್ಸರಗಳ ವಯಸ್ಸುಂಟು; ಚಿನ್ನಕ್ಕೆ ಪರಿಮಳವಿಟ್ಟಂತೆ ಈಗೀಗ ಯೌವನವು ತಲೆದೋರಿ ಆಕೆಯ ಮೈಯ ಸೊಬಗಿಗೆ ಮೆರುಗಿಡುತ್ತಲಿರುವುದು. ಹೊಂಬಣ್ಣದ ದೇಹದಮೇಲೆ ಆಗ ಉಟ್ಟಿದ್ದ ಬಿಳಿಯ ವಸ್ತ್ರವು ಚಿನ್ನಕ್ಕೆ ಪಟಿಕವನ್ನು ಪೂಸಿದಂತೆ ಲೋಕರೀತಿಯಾದಂದವನ್ನೇ ಉಂಟುಮಾಡುತಿತ್ತು. ಸುಂದರಾಂಗಿಯರ ಅಂಗವಂ ಸೇರಿದಾಗ ಯಾವುದುತಾನೇ ಅಂದವಾಗಿರದು? ಮೂಗಿನಲ್ಲಿ ಬುಲಾಕೂ, ಕಿವಿಗಳಲ್ಲಿ ನೀಲದ ಬಾವಿಲಿಗಳೂ, ಕೈಯಲ್ಲಿ ಕಂಕಣಗಳೂ, ಕತ್ತಿನಲ್ಲಿ ಸರಿಗೆಯೂ, ನಡುವಿನಲ್ಲಿ ಬೆಳ್ಳಿಯೊಡ್ಯಾಣವೂ, ಕಾಲಲ್ಲಿ ಅಂದುಗೆಕಾಲುಂಗುರಗಳೂ, ಆಕೆ ಆಗ ಧರಿಸಿಕೊಂಡಿದ್ದಳು. ಕಂಕಣಗಳಿಗೆ ಸಹಾಯವಾಗಿ ಬಣ್ಣಬಣ್ಣದ ಬಳೆಗಳೂ ಆರ

ಗಿನ ಪಟ್ಟೆಗಳೂ ಮುಂಗೈಗಳನ್ನಲಂಕರಿಸುತಿದ್ದುವು. ಈ ನಗ
ಗಳಿಂದ ಆಕೆಯ ಅವಯವಗಳಿಗೇನಾದರೂ ಕಾಂತಿಯುಂಟಾಗುವು
ದೋ ಇಲ್ಲವೊ; ಆದರೆ ಅವಯವಗಳಿಂದ ನಗಗಳು ಕಾಂತಿಹೊಂದು
ವುದುಮಾತ್ರ ಕರತಲಾಮಲಕವಾಗಿ ಕಾಣಬರುತ್ತಿರುವುದು.

ಸೃಷ್ಟಿಯಲ್ಲಿ ಯಾವ ಪದಾರ್ಥಕ್ಕೂ ಪರಿಪೂರ್ಣತ್ವವನ್ನು
ದಯೆಪಾಲಿಸದ ರೀತಿಯಲ್ಲಿಯೇ, ಸರ್ವಸಮನಾದ ಭಗವಂತನು ರುಕ್ಮಿ
ಣಿಯ ಸೌಂದರ್ಯದಲ್ಲಿಯೂ ಸ್ವಲ್ಪ ಕೊರತೆಯನ್ನುಂಟುಮಾಡಿಯೇ
ಇರುವನು. ನಿಜವಾಗಿ ಅದೊಂದು ಕೊರತೆಯೇ ಆಗಿದ್ದರೆ ಆಕೆಗೆ
ಇರುವ ಲೋಪವೆಲ್ಲಾ ಕತ್ತು ಉದ್ದವಾಗಿರುವುದೊಂದೇ. ಆದರೂ
ಮುಷ್ಟಿಸರ್ವಶಾಸ್ತ್ರಿ ನಿತ್ಯಯಾತ್ರೆಗೆ ಬಂದಾಗಲೆಲ್ಲಾ ಆಕೆಯ ಕತ್ತ
ನ್ನು ನೋಡಿ ಸಂತೋಷಿಸಿ, "ಮಿಕ್ಕಿಲಿ ನಿಡುದಗು ಪೆಡಕಾಮಿನಿ!
ಕುಲವರ್ಧನಿ ದಾನಿನೆರಗಿಕೊಂಡನಿರಿಬುಧುಲ್!" ಎಂಬ ಸಾಮುದ್ರಿಕ
ಗ್ರಂಥದ ಪದ್ಯವನ್ನು ಹೇಳಿ ಹೋಗುವನು.

ಆಗ ಒಬ್ಬ ವಿಧವೆ ನಡುವಿನುದ್ದದ ನೀರಲ್ಲಿ ದೂರವಾಗಿ ನಿಂತು
ಕೊಂಡು ಬಾಯಲ್ಲಿ ಏನೇನೋ ಜಪಿಸಿಕೊಳ್ಳುತ್ತ ನಡುನಡುವೆ ತಲೆ
ಯೆತ್ತಿ ಸೂರ್ಯನಕಡೆ ನೋಡಿ ಕೈಮುಗಿಯುತ್ತ, ಬೊಗಸೆಯಲ್ಲಿ ನೀ
ರೆತ್ತಿ ಸೂರ್ಯನಿಗರ್ಘ್ಯಗಳಂ ಬಿಡುತ್ತ, ಆಗಾಗ ಪ್ರದಕ್ಷಿಣಗಳಂ ಮಾಡು
ತ್ತ ಇದ್ದಳು. ಅದುವರೆಗೆಯೇ ಬಂದಿದ್ದ ಕೆಲವರು ಸ್ತ್ರೀಯರು
ತಮ್ಮ ಹಿತ್ತಾಳೆಯ ಬಿಂದಿಗೆಗಳನ್ನು ನೀರಿನಲ್ಲಿಟ್ಟು ದಡಕ್ಕೆ ಸಮೀಪ
ವಾಗಿದ್ದ ಕಲ್ಲಿನಮೇಲೆ ನಿಂತುಕೊಂಡು ಒಂದೊಂದುಪೆಟ್ಟುಹಾಕುತ್ತ
ಮಧ್ಯೇಮಧ್ಯೇ ಒಂದೊಂದು ಮಾತನಾಡುತ್ತ ಬಟ್ಟೆಗಳನ್ನೊಗೆಯು
ತಿದ್ದರು. ಒಬ್ಬ ವೃದ್ಧಾಂಗನೆ ಅರ್ಧಬಟ್ಟೆಯನ್ನುಟ್ಟುಕೊಂಡು ಮಿಕ್ಕ
ರ್ಧವನ್ನೊಗೆದುಕೊಂಡತರುವಾಯ ಒಗೆದ ಭಾಗವನ್ನುಟ್ಟುಕೊಂಡು
ಮಿಕ್ಕಭಾಗವನ್ನೊಗೆಯುತಿದ್ದಳು. ಆಚೆ ಹತ್ತುಮಾರು ದೂರದಲ್ಲಿ
ದಾಸೀಜನಗಳು, ಕೆಳಗೆ ಬಿದ್ದಿರುವ ಅಗುಳುಗಳಿಗಾಗಿ ಕಾವುಕಾವೆಂದು
ಕೂಡಿದ ಕಾಗೆಗಳನ್ನು ಕೈಯೆತ್ತಿ ಅಟ್ಟುತ್ತ, ಮುಸರೆಯ ತಪ್ಪಲೆ
ಗಳನ್ನು ಕರೆಯಲ್ಲಿಟ್ಟುಕೊಂಡು ಉಜ್ಜುತ್ತಿದ್ದರು. ಆಮೇಲ್ಗಡೆ

ಬೆಸ್ತರು ಪುಟಿಗೋಸಿಗಳನ್ನಿಟ್ಟುಕೊಂಡು ನಡುವಿಸುದ್ದ ನೀರಲ್ಲಿ
ನಿಂತು ಬಲೆಯ ಹಗ್ಗವನ್ನು ಉಡಿದಾರಕ್ಕೆ ಕಟ್ಟಿಕೊಂಡು ಇಕ್ಕೆಲಗಳಿಂ
ದಲೂ ಬಲೆಯನ್ನು ತಿರುವಿ ಆಳವಾದ ನೀರಿನಲ್ಲಿ ಬಲುಸಾರಿ ಜಾಡಿಸಿ
ಹತ್ತಿಕೊಂಡಿದ್ದ ಕೆಸರು ಹೋದತರುವಾಯ ಕರೆಗೆ ತೆಗೆದುಕೊಂಡು
5 ಬಂದು ತುದಿಗೆ ತಗುಲಿಸಿದ್ದ ಕಬ್ಬಿಣದ ಗುಂಡುಗಳು ಗಲಗಲಾ ಎನೆ,
ಬಲೆಗಳನ್ನು ಬಿಚ್ಚಿ, ಕಲ್ಲುಗಿಲ್ಲಿದ್ದರೆ ಕೆಳಗೆ ಬೀಸಾಡುತ್ತ ನಡುನಡುವೆ
ಬಲೆಗಣ್ಣುಗಳ ಸಂದುಗಳಿಂದ ಮಿಟ್ಟಮಿಟ್ಟ ಬೀಳುವ ಕಿರುಮೀನು
ಗಳನ್ನು ಕೈಯಲ್ಲೊಂಕಿಹಿಡಿದು ಮೀಮ್ಬುಟ್ಟಿಗಳನ್ನು ಕೈಯಲ್ಲಿ ಹಿಡಿ
ದು ನಿಂತಿರುವ ಹುಡುಗರ ಕೈಗೆ ಕೊಡುತಿದ್ದರು. ಅಲ್ಲಿಂದ ಮುಂದೆ
10 ನಾಲ್ಕು ಹೆಜ್ಜೆ ನಡೆದ ತರುವಾಯ, ದಿನಕ್ಕಾರಾಣೆಯಕೂಲಿಸಂಪಾದಿಸ
ಲುಳ್ಳ ಒಬ್ಬ ಸೋಮಾರಿಯು ನೀರಲ್ಲಿರುವ ನಡುದೋಣಿಯಮೇಲೆ
ಹತ್ತಿ, ಗಡ್ಡೆಕಟ್ಟಿದ ರಕ್ತದ ಮುದ್ದೆಯನ್ನು ಒಂದು ಹಗ್ಗದ ಕೊನೆ
ಯಲ್ಲಿನ ಗಾಳಕ್ಕೆ ಚುಚ್ಚಿ, ಎದ್ದು ನಿಂತು, ಬಲಗೈಯಿಂದ ತನ್ನ ಶಕ್ತಿ
ಯಿದ್ದಷ್ಟು ಹಗ್ಗವನ್ನು ಗಿರಗಿರನೆ ತಿರುಗಿಸಿ ಆಳವಾದ ನೀರಲ್ಲಿ
15 ಬೀಸಿ, ಪುನಃ ಕುಳಿತುಕೊಂಡು ಮೀನು ಯಾವಾಗ ಸಿಕ್ಕೀತೋ ಎಂಬ
ತದೇಕಧ್ಯಾನದಿಂದ ಹಗ್ಗದಕಡೆಯೇ ನೋಡುತ್ತ, ಅದು ಕದಲಿದಾಗೆ
ಲ್ಲಾ ಉಲುಕುಲುಕಿ ಬೀಳುತ್ತ, ದೈವವಶದಿಂದ ಮೀನು ಗಾಳವನ್ನು
ನುಂಗಿ ಬದ್ಧಾಡುತ್ತಿರಲು, ಮೆಲ್ಲಮೆಲ್ಲನೆ ಎಳೆಯುತ್ತ, ಹರಿದುಕೊಂಡು
ಓಡಿಹೋಗುವುದೋ ಏನೋ ಎಂಬ ಭಯದಿಂದ ಬಲಗೈಯಲ್ಲಿರುವ
20 ಹಗ್ಗವನ್ನು ಸ್ವಲ್ಪ ಸಡಿಲಬಿಟ್ಟು ಪುನಃ ಎಳೆದು ಉಂಡೆಯಾಗಿ
ಸುತ್ತುತ್ತ, ಮೀನಿಗಾಯಾಸವಾದಮೇಲೆ ದಡಕ್ಕೆಳೆದುಕೊಂಡು ಹೋಗಿ
ದೊಡ್ಡ ನಿಕ್ಷೇಪವನ್ನು ಕಂಡ ಕಡುಬಡವನಂತೆ ಪರಮಾನಂದವನ್ನು
ಹೊಂದುತ್ತ; ದಡದವರೆಗೂ ಬಂದ ತರುವಾಯ ಗ್ರಹಚಾರ ಸಾಲದೆ
ಮತ್ಸ್ಯವು ಹಗ್ಗವನ್ನು ಹರಿದುಕೊಂಡು ಓಡಿಹೋಗೆ, ಕೈಗೆ ಬಂದ
25 ಸ್ವತ್ತನ್ನು ಕಳೆದುಕೊಂಡವನಂತೆ ಕಳವಳಪಡುತ್ತ, ಮೀನು ಬಾರದೆ
ಹೋಗಲು ಎರಡಾಣೆಯ ಗಾಳವುಕೂಡ ಹೋಯಿತಲ್ಲಾ ಎಂದು
ವಿಚಾರಪಡುತ್ತ, ಬರಿಗೈಯಲ್ಲಿ ಮನೆಗೆ ಹೋದನು. ಆಸಮೀಪದಲ್ಲೇ

ದಡದಲ್ಲಿ ಸೇರಿ ಪ್ರಾಯದ ಹುಡುಗರು ಬಿದಿರ ಜಳವೆಗೆ ಒಂದು ದಾರ
ವನ್ನು ಕಟ್ಟಿ ಅದರ ಕೊನೆಯಲ್ಲಿನ ಚಿಕ್ಕ ಗಾಳಕ್ಕೆ ಎರೆಹುಳ
ಗಳನ್ನು ಚುಚ್ಚಿ ನೀರೊಳಕ್ಕೆ ಹಾಕುತ್ತ, ತಟಕ್ಕನೆ ತೆಗೆಯುತ್ತ,
ಸಣ್ಣಮೀನುಗಳನ್ನು ಹಿಡಿದುಕೊಂಡು ಬೇರೆಯೊಂದು ದಾರಕ್ಕೆ ಗುದಿ
ಪೋಣಿಸಿ 'ನನಗೆ ಹತ್ತು ಜಲ್ಲಿಮೀನು ಸಿಕ್ಕಿದವು.' 'ನನಗೆ ನಾಲ್ಕು
ಪರಿಕೆಮೀನು ಸಿಕ್ಕಿದವು' ಎಂದು, ಒಬ್ಬರೊಬ್ಬರೊಡನೆ ಹೇಳಿಕೊ
ಳ್ಳುತ್ತ ಸಂತೋಷಪಡುತಿದ್ದರು. ಅಲ್ಲಿನ ಬಸರಿಯಮರದಮೇಲೆ
ಕುಳಿತಿದ್ದ ಒಂದು ರಣಹದ್ದು ಆಕಸ್ಮಾತ್ತಾಗಿ ಬಂದು ಒಂದೆರಡುಸಾರಿ
ಹುಡುಗರು ದಾರಕ್ಕೆ ಪೋಣಿಸುವುದಕ್ಕಾಗಿ ಕೈಯಲ್ಲಿ ಹಿಡಿದುಕೊಂ
ಡಿದ್ದ ಮೀನುಗಳನ್ನೆಗರಿಸಿಕೊಂಡು ಹೋಯಿತು.

ಆಗ ದೊಡ್ಡ ಮುತ್ತೈದೆಯೊಬ್ಬಳು ಮುಖಕ್ಕೆಲ್ಲಾ ಒಂದೇ
ಬಟ್ಟೆಟ್ಟುಕೊಂಡು ಬುಜದಮೇಲೆ ಬಟ್ಟೆಗಳೊಡನಿಟ್ಟುಕೊಂಡಿದ್ದ ಬಿಂ
ದಿಗೆಯನ್ನು ತೆಗೆದು ಕೈಯಲ್ಲಿ ಹಿಡಿದುಕೊಂಡು ರುಕ್ಮಿಣಿಯಿದ್ದ ತಾ
ವಿಗೆ ಬಂದು ಗೌರವತೋರ್ಪಡಿಸುತ್ತ "ಅಮ್ಮಾಯಿಯವರೇ!
ಏನು? ನೀವೀದಿನ ಸ್ನಾನಕ್ಕೆ ದಯಮಾಡಿಸಿದ್ದೀರಿ?" ಎಂದಳು.

ರುಕ್ಮಿಣಿ—"ಕಾರ್ತಿಕ ಸೋಮವಾರವಲ್ಲವೇ? ಕಡೆಯ ಸೋಮ
ವಾರವಾದುದರಿಂದ ಪ್ರದೋಷದವೇಳೆ ನಮ್ಮಮ್ಮನ ಸಂಗಡ ಶಿವಾಲ
ಯಕ್ಕೆ ಹೋಗಬೇಕೆಂದು ಗೋದಾವರೀಸ್ನಾನಮಾಡುವುದಕ್ಕೆ ಬಂದಿ
ದೇನೆ."

ದೊಡ್ಡಮುತ್ತೈದೆ—"ನೀವು ರಾತ್ರಿಯವರೆಗೂ ಭೋಜನವಿಲ್ಲದೆ
ಇರಲಾಪಿರಾ?"

ರು.—"ಬಂದುದಿನಕ್ಕೇನು? ಹೇಗಾದರೂ ಇರುವೆನು. ಮೊನ್ನೆ
ನಿಮ್ಮ ಕಿರಿಯಮಗಳಿಗೆ ಶರೀರದಲ್ಲಿ ನೆಮ್ಮದಿಯಾಗಿಲ್ಲವೆಂದು ಹೇಳಿದ್ದಿರಿ.
ಈಗ ಸ್ವಲ್ಪ ಗುಣವಾಗಿದೆಯೇ?"

ದೊ.—"ಏನು ನೆಮ್ಮದಿಯೋ ನನಗೆ ತಿಳಿಯದು. ನಮ್ಮವರು
ಎರಡು ದಿನಗಳಿಂದ ಶಾಮಾವಧಾನಿಗಳ ಕೈಯಿಂದ ವಿಭೂತಿಯಿಡಿಸುತ್ತಿ
ದಾರೆ. ರಾತ್ರಿ ಬೆಳಗಾಗುವವರೆಗೂ ನಿದ್ದೆಯಿಲ್ಲದೆ ತೊಂದರೆಪಟ್ಟೆವು."

ರು.—“ ಗ್ರಹಬಾಧೆಯೋ ಏನು ? ”

ದೊ.—“ ಅಹುದಮ್ಮಾಯಿ ! ಏನು ಹೇಳಿಕೊಳ್ಳಲಿ? ಗಂಡ ”—
‘ ಇಲ್ಲಿ ಯಾರೂ ಇಲ್ಲವಷ್ಟೆ ’ ಎಂದು ನಾಲ್ಕು ಕಡೆಗಳಲ್ಲೂ ನೋಡಿ
ಮತ್ತಿಷ್ಟು ಹತ್ತಿರಬಂದು ಕಿವಿಯಲ್ಲಿ ಮೆಲ್ಲಗೆ “ ಗಂಡ ಹಿಡಿದು ಹುರಿದು
ಕೊಂಡು ತಿನ್ನುತ್ತಾನೆ. ನೀವು ಕಂಡಿರುವಿರಷ್ಟೆ? ಅವಳಿಗೆ ಮದುವೆ
ಯಾಗಿ ಇನ್ನೂ ಮೂರುವರುಷವಾಗಲಿಲ್ಲ; ಆಗಲೇ ಅವಳ ಗಂಡ
ಸತ್ತು ಆರುತಿಂಗಳಾಯಿತು. ಆಗಿನಿಂದ ಅವಳಿಗೆ ಕೆಲವುದಿನ ಕನಸಿನಲ್ಲಿ
ಯೂ ಕೆಲವುದಿನ ರಾತ್ರಿವೇಳೆ ಒಬ್ಬಳೇ ಇರುವಾಗಲೂ ಕಾಣಿಸುತ್ತ
ಲೇ ಇರುವನು. ಹುಡುಗಿ ನಾಚಿಕೆಯಿಂದ ಯಾರಿಗೂ ಹೇಳದೆ
ಮುಚ್ಚಿಟ್ಟಿದ್ದಳು. ತಿಂಗಳಿಂದ ಯಾವಾಗಲೂ ಬಿಡದೆ ರಾತ್ರಿಯೂ
ಹಗಲೂ ಹೋದಕಡೆಯಲ್ಲೆಲ್ಲಾ ಸಂಗಡಲೇ ತಿರುಗುತ್ತಿರುವನು. ಏನು
ಪಾಪವೋ ! ಮೂರು ದಿನಗಳಿಂದ ಮತ್ತಿಷ್ಟು ಕಿತ್ತುಕೊಂಡು ತಿನ್ನು
ತಿದಾನೆ. ಈಮೂರು ದಿನಗಳಿಂದ ಹುಡುಗಿ ಅರ್ಧವಾಗಿ ಹೋದಳು.
ಇಷ್ಟೇ ಅಲ್ಲವೆ ? ಗಂಡನೊಡನೆ—” ಎಂದು ಹೊಟ್ಟೆಯಲ್ಲಿನ ದುಃಖ
ವು ಹೊರಬೀಳೆ, ಸಲ್ಪ ತಾಳಿಕೊಳ್ಳುತ್ತ ಕಣ್ಣೀರನ್ನು ಸೆರಗಿನಿಂದೊರ
ಸಿಕೊಳ್ಳುತ್ತ ಸ್ವಲ್ಪ ಸುಮ್ಮನಿದ್ದು ಗದ್ಗದ ಸ್ವರದಿಂದ—“ ಗಂಡನೊ
ಡನೆ ಸೌಖ್ಯವನ್ನನುಭವಿಸಿಯಾಳೆ ? ಸಂಸಾರ ಮಾಡಿಯಾಳೆ ? ” ಎಂದು
ಸ್ವಲ್ಪ ಗಟ್ಟಿಯಾಗಿ ಅಳತೊಡಗಿದಳು.

ರು.—ಆಮಾತುಗಳು ಮನಸ್ಸಿಗೆ ನಾಟಿ ದೇಹವು ಪುಲಕಿಸೆ ಸ್ವಲ್ಪ
ತಾಳಿ ಧೈರ್ಯತಂದುಕೊಂಡು, “ ನೀನು ದೊಡ್ಡ ಮುತ್ತೈದೆ.
ಹಾಗೆ ಕಣ್ಣೀರುಹಾಕಬಾರದು, ಸುಮ್ಮನಿರು, ಸುಮ್ಮನಿರು. ರೋ
ಗವು ಮನುಷ್ಯರಿಗೆ ಬಾರದೆ ಮರಗಳಿಗೆ ಬರುವುದೇ.”

ದೊ.—ಅಳುವನ್ನು ಸಾಕುಮಾಡಿ—“ ಅಮ್ಮಾಯಿ ! ಅವಳಿಗಾವ
ಸೌಖ್ಯವೂ ಅಕ್ಕರೆಯಿಲ್ಲ. ಹೀಗಾದರೂ ಬದುಕಿದ್ದರೆ ಸಾಕು. ನಮ್ಮ
ಮುದಿಪ್ರಾಣಗಳಿರುವವರೆಗೂ ಅವಳಿಗೆ ಅನ್ನವಸ್ತ್ರಗಳಿಗೇನೂ
ಲೋಪ ಬಾರದು.”

ರು.—ಸ್ವಲ್ಪಹೊತ್ತು ಏನೋ ಆಲೋಚಿಸಿ—' ಸೋಮಿದೇ
ವಮ್ಮಾ ! ನಿಮ್ಮವರು ಈಯೂರಲ್ಲಿ ದೊಡ್ಡ ಸಿದ್ಧಾನ್ತಿಗಳಲ್ಲವೆ? ತಿಳಿ
ದೂಕೂಡ ಹುಡುಗಿಯನ್ನು ಅಂತಹ ಅರ್ಧಾಯುಷ್ಮಂತನಿ—"

ದೊ.—ಮಾತಿಗಡ್ಡವಾಗಿ ಬಂದು—" ಅಹುದಹುದು ; ನೀನು
ಕೇಳಹೋಗುವುದನ್ನು ನಾನು ಗ್ರಹಿಸಿದೆನು. ಯಾರ ಅದೃಷ್ಟಕ್ಕೆ 5
ಯಾರು ಕರ್ತರು ? ಅವಳಿಗೆ ಮುಂಡೆಮೋಚಬೇಕಾದ ಹಣೆಬರಹ
ವಿರುವಾಗ ಯಾರು ತಪ್ಪಿಸಬಲ್ಲರು ? ಯಾರಾದರೂ ಜಾತಕವನ್ನು
ಒಳ್ಳೆಯದಾಗಿ ನೋಡಿ ವಿವಾಹಮಾಡುವರಲ್ಲದೆ ಮದುವೆಯ ವರನಿಗಿ
ಲ್ಲದ ಆಯುಸ್ಸನ್ನು ತಂದೆರೆಯಬಲ್ಲರೆ ?"

ರು.—" ಅಹುದು, ಜಾತಕದಲ್ಲಿ ನಿಮ್ಮಳಿಯನಿಗೆ ಪೂರ್ಣಾಯು 10
ಸ್ಸೇ ಇದೆಯೇನೋ ?"

ದೊ.—ಸ್ವಲ್ಪ ಅನುಮಾನಿಸಿ—' ಪೂ—ರ್ಣಾ—ಯು—ಸ್ಸೇ ?—
ಅಹುದು. ಪೂರ್ಣಾಯುಸ್ಸೇ ಇದೆ. ಜಾತಕಪ್ರಕಾರವಾಗಿ ನಡೆ
ಯುವುದಿಲ್ಲವೆ ? ಎನ್ನುವಿಯೇನೋ ? ಕಾಲವನ್ನು ಸರಿಯಾಗಿ ನೋಡಿ
ಜಾತಕಬರೆದರೆ, ಅದರಲ್ಲೆಷ್ಟಕ್ಷರಗಳಿವೆಯೋ ಅಷ್ಟಕ್ಷರಗಳೂ ನಡೆ 15
ಯುವುವು. ಶಾಸ್ತ್ರವನ್ನು ಚೆನ್ನಾಗಿ ತಿಳಿಯದವರು ಕಾಲವನ್ನು
ನಿಶ್ಚಯಿಸಲಾರದೆ ಹಾಳುಮಾಡುವರು. ನಮ್ಮವರು ಇಷ್ಟು ಮು
ಹೂರ್ತಗಳನ್ನಿಟ್ಟಿದಾರಷ್ಟೆ ? ನೀನು ಕಂಡಿರುವಷ್ಟರವರೆಗೆ ಮ
ತ್ತೊಂದು ವಿಧವಾಗಿ ಎಲ್ಲಿಯಾದರೂ ನಡೆದಿರುವುದೇನು ಹೇಳು ?"

ರು.—ಕನ್ನಮ್ಮನವರ ಬುಚ್ಚಮ್ಮನ ವಿವಾಹಮುಹೂರ್ತವನ್ನು 20
ನಮ್ಮ ಹಜಾರದಲ್ಲಿ ನಮ್ಮ ಸಿದ್ಧಾನ್ತಿಯವರೇ ಇಟ್ಟಿರಲ್ಲದೆ ಆಕೆಯ
ಗಂಡನ ಜಾತಕವನ್ನು ಕೂಡ ಸಿದ್ಧಾನ್ತಿಯವರೇ ಬರೆದು—"

ದೊ.—" ಅಹುದು ಒಂದೊಂದು ತಪ್ಪಿಹೋಗುವುದೂ ಉಂಟು.
ಜ್ಯೋತಿಷಕ್ಕೆ ಪಾರ್ವತಿಯ ಶಾಪವಿದೆಯಂತೆ, ನಮ್ಮವರು ಯಾವಾಗ
ಲೂ ಈಸಂಗತಿಯನ್ನೇ ಹೇಳುತಿರುವರು. ದಡದಮೇಲೆ ಕಾಲುಂಗು 25
ರದ ಸದ್ದು ಆಗುತ್ತಿದೆ, ಯಾರೋ ಬರುವಂತಿದೆ. ಇಲ್ಲಿಗೆ ಈಸಂಗ

ತಿಯನ್ನು ಸಾಕುಮಾಡೋಣ" ಎಂದು ಹಿಂದಕ್ಕೆ ತಿರುಗಿನೋಡಿ ಬಿಂದಿಗೆಯನ್ನು ಕರೆಯಲ್ಲಿಟ್ಟು ಸ್ನಾನಕ್ಕೆ ನೀರಲ್ಲಿಳಿದಳು.

ಅಷ್ಟರಲ್ಲಿ ಕೆಲವರು ಮುತ್ತೈದೆಯರೂ ವಿಧವೆಯರೂ ಪಾವಟಿಗೆಗಳನ್ನಿಳಿಯುತ್ತ ಮುಂದಿರುವವರು ಬಗ್ಗಿ ಕಾಲಲ್ಲಿರುವ ಬೆಳ್ಳಿಯ ಪಾಡ
5 ಗಗಳನ್ನು ಸ್ವಲ್ಪ ಮೇಲಕ್ಕೆ ತೆಗೆದುಕೊಳ್ಳುತ್ತ ಹಿಂದಕ್ಕೆತಿರುಗಿ ದೂರದಲ್ಲಿರುವರು ಬರುವವರೆಗೂ ಹತ್ತಿರಿದ್ದವರೊಂದಿಗೆ ಮಾತಾಡುತ್ತ ಮೆಲ್ಲಮೆಲ್ಲಗೆ ನೀರಿನ ಸಮೀಪಕ್ಕೆ ಬಂದು ಗೃಹಕೃತ್ಯಗಳನ್ನು ಕುರಿತು ಮಾತಾಡಿಕೊಳ್ಳುತ್ತ ಬಿಂದಿಗೆಗಳನ್ನು ಕರೆಯಲ್ಲಿಟ್ಟರು. ಎಲ್ಲರೂ ಒಂದು ಕಡೆ ಸೇರಿ ಸಾವಕಾಶವಾಗಿ ಮಾತಾಡಿಕೊಳ್ಳುವುದಕ್ಕೆ ನೀರಿಗೆಬಂದ
10 ಕಾಲಕ್ಕಿಂತ ಒಳ್ಳೆಯ ಸಮಯ ಸ್ತ್ರೀಯರಿಗಾವಾಗಲೂ ದೊರೆಯದಷ್ಟೆ? ಅದರಿಂದಲೇ ಅವರು ಸಾಧಾರಣವಾಗಿ ಸ್ವಲ್ಪವಿರಾಮಮಾಡಿಕೊಂಡು ಮಾತಾಡಬೇಕಾದ ನಾಲ್ಕು ಮಾತುಗಳನ್ನು ನೀರಿಗೆ ಬಂದಾಗಲೇ ಮಾತಾಡಿಕೊಂಡು ಹೋಗುವರು. ಆಗ ಮೂವತ್ತುವರುಷದ ಪ್ರಾಯವುಳ್ಳ ಗಿಡ್ಡ ಹೆಂಗಸೊಬ್ಬಳು ಮುಂದಕ್ಕೆ ಬಂದು ಮೂಗಿನ
15 ಮೇಲೆ ಕೈಯಿಟ್ಟುಕೊಂಡು "ಎಲೇ! ವೆಂಕಮ್ಮ! ರಾತ್ರಿ ಶೇಷಮ್ಮನನ್ನು ಗಂಡ ಹೊಡೆದನಂತೆ! ಕೇಳಿದೆಯೊ?"

ವೆಂಕಮ್ಮ—"ಅವಳನ್ನು ಗಂಡ ಯಾವಾಗಲೂ ಹಾಗೆಯೇ ಹೊಡೆಯುತ್ತಿರುವನು. ತಿಂಗಳಕೆಳಗೆ ದೊಣ್ಣೆತೆಗೆದುಕೊಂಡು ಹೊಡೆದಾಗ ಕೈಬಳೆಗಳೆಲ್ಲಾ ಒಡೆದುಹೋದುವು."

20 ಗಿಡ್ಡ.—"ಅವಳು ಗಂಡನಿಗೆ ಬೇಡವಂತೆ!"

ಆಗ ಪಟ್ಟೆತಲೆಯ ಮುತ್ತೈದೆಯೊಬ್ಬಳು ಕೈಗಳನ್ನು ತಿರುಗಿಸುತ್ತ ಮುಂದಕ್ಕೆ ಬಂದು "ಸರಿ! ಸರಿ! ಅವಳ ಗುಣಮಾತ್ರ ಸರಿಯಾದ್ದೋ? ಮೊನ್ನೆ ಸುಬ್ಬಾವಧಾನಿಗಳ ಮಗನೊಡನೆ ಮಾತಾಡುತಿದ್ದದ್ದು ಗಂಡನ ಕಣ್ಣಿಗೇ ಬಿತ್ತಂತೆ! ಗಂಡಸು ಹ್ಯಾಗಿದ್ದರೂ ದೋಷ
25 ವಿಲ್ಲ. ಹೆಂಗಸಿನ ನಡತೆ ಸರಿಯಾಗಿರಬೇಡವೆ?"

ಗಿಡ್ಡ.—"ಅದಕ್ಕೇನು ಹಾಗೇ ಆಗಲಿ;—ಪಾಪ! ಚಿನ್ನಮ್ಮನ್ನ

ಅವರತ್ತೆ ಲೋಕದಲ್ಲಿಲ್ಲದ ಸೊಸೆತನವನ್ನಿಡುತಿದಾಳೆ. ಅಷ್ಟೇ ಅಲ್ಲದೆ ಗಂಡ ಮನೆಗೆ ಬರುವ ಹೊತ್ತಿಗೆ ಯಾವುವೋ ನಾಲ್ಕು ಇದ್ದೂಇಲ್ಲದ ತಪ್ಪುಗಳನ್ನು ಕಲ್ಪಿಸಿ ಹೇಳುವಳು. ಅದರಮೇಲೆ ಆತನು ಪ್ರತಿ ದಿನವೂ ಅವಳನ್ನು ಸಾಯಹೊಡೆಯುವನು."

ಹದಿನಾರು ಸಂವತ್ಸರದ ವಯಸ್ಸಿನ ಶ್ಯಾಮಲವರ್ಣದ ಹೆಂಗಸೊಬ್ಬಳು ಕಣ್ಣೀರಿಟ್ಟುಕೊಳ್ಳುತ್ತ "ಅತ್ತೆ ಬದುಕಿರುವ ಕಡೆಯಲ್ಲೆಲ್ಲಾ ಇದೇ ಕರ್ಮ. ಲೋಕದಲ್ಲಿ ಅತ್ತೆಯರೆಲ್ಲಾ ಒಂದೇಸಾರಿ ಸಾಯಬಾ—"

ಗಿಡ್ಡ—"ಶೇಷಮ್ಮಾ ! ನಿಮ್ಮತ್ತೆಯೂ ನಿನ್ನನ್ನು ಬಹಳವಾಗಿ ಬಾಧೆಯಿಡುತ್ತಾಳೆಂದು ಕೇಳಿದೇನೆ. ನಿಜವೇ ?"

ಶೇಷಮ್ಮ—"ಬಾಧೆಗೀಧೆ ನನಗೆ ತಿಳಿಯದು. ಕೊಯ್ಲುತಾಳಲಾರದೆ ಸತ್ತುಹೋಗುತ್ತಿದೇನೆ ; ಬೆಳಗಿನ ಜಾವಕ್ಕೆದ್ದು ಮನೆಯ ಕಸವುಸುರೆಮಾಡಿ, ಮನೆಗೆ ಬೇಕಾದಷ್ಟು ನೀರುಸೇದಿ, ಬಟ್ಟೆಗಳನ್ನೊಗೆದು, ಆಕೆ ಎದ್ದುಬರುವವರೆಗೆ ಕೆಲಸಗಳನ್ನೆಲ್ಲಾ ಮಾಡಿರುವೆನು. ಹೊತ್ತು ಹುಟ್ಟಿದ ನಾಲ್ಕುಗಳಿಗೆಗೆ ಎದ್ದು ಕಣ್ಣುಗಳನ್ನು ಹೊಸಗಿಕೊಳ್ಳುತ್ತ ಬಂದು ಸಾಟನಲ್ಲಿ ಮುಸರೆ ಹೋಗಲಿಲ್ಲವೆಂದೂ, ಬಾಗಿಲಲ್ಲಿ ಸೆತ್ತೆ ಹಾಗೆಯೇ ಇದೆಯೆಂದೂ ಬಯ್ಯುವುದಕ್ಕೆ ಮೊದಲು ಮಾಡುವಳು. ತರುವಾಯ ಹೆಗಲುಮುರಿಯುವಂತೆ ಸಗಣಿಯೆತ್ತಿ ಗೋಡೆಯಮೇಲೆ ಬೆರಣಿತಟ್ಟಿ ಜಾವ ಹೊತ್ತಿನಮೇಲೆ ತಂಗಳೂಟಕ್ಕೆ ಬರುವವರೆಗೆ, "ಬಂದು ಮೂಲೆಯಲ್ಲಿ ಬೆಳಗಾಗುವುದಕ್ಕೆ ಮುಂಚೆಯೇ ತಿಂಡಿಗೆ ಸಿದ್ಧಪಡುತ್ತೀಯೆ ; ಕೆಲಸಮಾತ್ರ ಮುಟ್ಟುವುದಿಲ್ಲ" ಎಂದು ಅಡಿಗೆಮಾಡುತ್ತ ಸಾಧಿಸುವಳು. ಹಗಲು ಗಂಡನಸಂಗಡ ಮಾತಾಡಿದರೆ ತಪ್ಪೆಷ್ಟು ? ರಾತ್ರಿ ಎಲ್ಲರ ಊಟವಾದಮೇಲೆ ಅತ್ತೆಯವರಿಗೆ ಕಾಲುಹಿಸುಕಿ ಆಕೆ ನಿದ್ದೆಹೋದ ಬಳಿಕ ಮಲಗುವುದಕ್ಕೆ ಹೋಗುವ ಹೊತ್ತಿಗೆ ರಾತ್ರಿ ಎರಡುಜಾವವಾಗುವುದು. ಮಲಗಿಕೊಂಡಾಗಿನಿಂದ ಯಾವಾಗ ಬೆಳಗಾಗಿ ಹೋಗುವುದೋ, ಹೊತ್ತಿಗೆ ಸರಿಯಾಗಿ ಕೆಲಸವಾಗದಿದ್ದರೆ ಅತ್ತೆಯವರೆಲ್ಲಿ ಸಿಟ್ಟುಮಾಡಿಕೊಳ್ಳುವರೋ ಎಂದು

ನಿದ್ದೆಯಲ್ಲಿ ಕೂಡ ಉಲುಕಿಬೀಳುವೆನು. ಹೀಗಿದ್ದರೂ ನನಗೆ ಬಯ್ಗಳೂ ದೆಬ್ಬೆಗಳೂ ತಪ್ಪುವುದಿಲ್ಲವಲ್ಲಾ ! " ಎಂದು ಮುಖಕ್ಕೆ ಸೆರಗನ್ನಡ್ಡವಾಗಿಟ್ಟುಕೊಂಡು ಕಣ್ಣೀರಿಡುವುದಕ್ಕೆ ಪ್ರಾರಂಭಿಸಿದಳು.

ರು.— " ಅತ್ತೆಯವರಿಗೆ ಕೋಪ ಬಾರದಂತೆ ನೀನು ಮಾಡುವ 5 ಕೆಲಸವನ್ನು ಚೆನ್ನಾಗಿ ಮಾಡಬಾರದೆ ? "

ಶೇಷಮ್ಮ — " ಅಯ್ಯೋ ! ರುಕ್ಮಿಣಮ್ಮಾ ! ನಿನಗತ್ತೆಯಿಲ್ಲವಾದುದರಿಂದ ನಿನಗೀಸಂಗತಿಗಳೇನೂ ತಿಳಿಯವು. ಎಷ್ಟು ಕೆಲಸಮಾಡಿದರೂ ಅತ್ತೆಯವರಿಗೆ ಯಾವಾಗಲೂ ಮೆಚ್ಚಿಗೆಯಿಲ್ಲ. ಸಗಣಿನೀರು ಹಾಕುವಾಗ ಬತ್ತಾಗಿ ಚೆಲ್ಲಿದರೆ " ಮನೆಯೆಲ್ಲಾ ಸಮುದ್ರಮಾಡಿ 10 ದ್ದೀಯೆ, ಜಾರಿಬಿದ್ದು ಸಾಯಬೇಕೆಂದೋ ? " ಎಂದು ಬಯ್ಯುವಳು. ತೆಳ್ಳಗೆ ಚೆಲ್ಲಿದರೆ " ನೀರಿಗೆ ಬರಬಂದಂತೆ ಸಗಣಿನೀರು ಚೆಲ್ಲಿಯೇ ಇಲ್ಲ" ಎಂದು ಬಯ್ಯುವಳು. ಕೇಳಿದಮಾತಿಗೆ ಉತ್ತರಹೇಳಿದರೆ " ನನ್ನ ಮಾತಿಗೆ ಪ್ರತಿಯಾಡುತ್ತೀಯಾ ? " ಎಂದು ಕೊಯ್ದಿಡುವಳು. ಬದಲುಹೇಳದೆ ಸುಮ್ಮನಿದ್ದರೆ " ಮೊದ್ದಿನಂತೆ ಮಾತಾಡದೇ ಇದ್ದೀ 15 ಯೆ ? " ಎಂದು ಬಯ್ಯುವಳು. ಆಕೆಯ ಮುಂದೆ ಏನುಮಾಡಿದರೂ ತಪ್ಪೇ. ' ಅ ' ಎಂದರೆ ಅಪರಾಧ, ' ನಾರಾಯಣಾ ' ಎಂದರೆ ಕೆಟ್ಟ ಮಾತು. ನಾನು ಅತ್ತೆಮನೆಗೆ ಬಂದ ನಾಲ್ಕು ಸಂವತ್ಸರಗಳಿಂದಲೂ ಬಳಸುತಿದ್ದ ತೂತುಮಡಕೆ ನಾಲ್ಕು ದಿನಗಳ ಕೆಳಗೆ ಒಡೆದುಹೋಗೆ ಕಲ್ಲಿನಹಾಗಿದ್ದ ಹೊಸಮಡಕೆಯನ್ನೊಡೆದುಬಿಟ್ಟೆಯೆಂದು ಇಂದಿನವ 20 ರೆಗೂ ಬಯ್ಯುತ್ತಿದ್ದಾಳೆ.

ಗಿಡ್ಡ.— " ಅತ್ತೆಯೊಡೆದುದು ಹಳೆಯಮಡಕೆ, ಸೊಸೆಯೊಡೆದುದು ಹೊಸಮಡಕೆ ಎಂಬ ಗಾದೆಯನ್ನು ಕೇಳಿಲ್ಲವೇ ? "

ಶೇಷಮ್ಮ— " ನಾನು ಪಡುವ ಬಾಧೆ ಈಗ ಏನು ನೋಡುತ್ತೀರಿ ? ನನ್ನ ವಿಧವೆಯಾದ ನಾದಿನಿ ಬದುಕಿದ್ದಾಗ ನೋಡಬೇಕು. 25 ಹೋದವರುಷ ಅವ್ಮ ಎದ್ದು—ದೈವದ ಹೊಟ್ಟೆ ತಣ್ಣಗೆ—ಅವಳು ಹೋದಾಗಿನಿಂದ ಮೂರುಹೊತ್ತೂ ಹೊಟ್ಟೆಗಿಷ್ಟು ಅನ್ನವನ್ನಾದರೂ ಚೆನ್ನಾಗಿ ತಿನ್ನುತ್ತಿದ್ದೇನೆ. ಅವಳು ಜೀವಿಸಿದ್ದಾಗ ಅದೂ ಇಲ್ಲ.

ಇದ್ದಮಾತು ಹೇಳಬೇಕು. ಎಷ್ಟುಮಾತುಗಳನ್ನಾಡಿದರೂ ಈಗ ನಮ್ಮ ಅತ್ತೆಯವರು ಅನ್ನವನ್ನು ಚೆನ್ನಾಗಿ ತಿನ್ನಲಾದೆಯೆಂದು ಬಯ್ಯುವರಲ್ಲದೆ ಹೆಚ್ಚಾಗಿ ತಿಂದುಹೋದೆಯೆಂದು ಬಯ್ಯುವುದಿಲ್ಲ."

ಗಿಡ್ಡ.—"ಲೋಕದಲ್ಲಿ ಯಾರೂ ಇಲ್ಲದಿದ್ದರೆ—ಹಿಟ್ಟಿನಲ್ಲಿ ಬೊಂಬೆಯನ್ನು ಮಾಡಿ ಮಣೆಯಮೇಲೆ ಕೂಡಿಸಿದರೆ ಹೆಣ್ಣುಮಗಳತನಕ್ಕೆ ಹಾರಿಹಾರಿ ಬಿತ್ತು—ಎಂಬ ಗಾದೆ ಸುಮ್ಮನೆ ಹುಟ್ಟಿತೇ?"

ಇಷ್ಟರಲ್ಲಿ ಜಪಮಾಡಿಕೊಳ್ಳುತ್ತಿದ್ದ ಮುದುಕಿ ಸ್ವಲ್ಪದೂರ ಬಂದು ಚೆಂಬಿನಲ್ಲಿದ್ದ ನೀರನ್ನು ಚೆಲ್ಲಿ "ನಿಮ್ಮ ಮಾತುಗಳ ಸಂದಡಿಯಲ್ಲಿ ಕಣ್ಣುಕಾಣುವುದೇ? ಈಕಡೆ ಸ್ನಾನಮಾಡಿದವರಿದಾರೆಯೆಂಬುದು ಕೂಡ ಇಲ್ಲ. ಸುಮ್ಮನೆ ನೀರುಸಿಡಿಸುತ್ತೀರಿ. ಮೈಲಿಗೇ ನೀರು ಮೈಮೇಲೆ ಬಿದ್ದದರಿಂದ ಸ್ನಾನಮಾಡಿದ ಮುಂಡೆ ಈಚಳಿಯಲ್ಲಿ ಪುನಃ ಮುಳುಗುತ್ತೇನೆ," ಎಂದು ಗೊಣಗುಟ್ಟುತ್ತ ಆಳವಾದ ನೀರೊಳಕ್ಕೆ ನಡೆದು ಬುಡಬುಡನೆ ನಾಲ್ಕು ಮುಳುಕುಹಾಕಿ ಅಲ್ಲಿಂದ ಹೊರಟು ಮಾತಾಡುತಿದ್ದವರ ಕಡೆ ಕಣ್ಣು ಕೆಂಪಗೆ ಮಾಡಿಕೊಂಡು ನೋಡುತ್ತ "ಅಮ್ಮಣ್ಣೀರು ಕೆಳಗೂ ಮೇಲೂ ಕಾಣದೆ ಹಾರಿ ಬೀಳುತ್ತಾರೆ. ನಮ್ಮ ಕಾಲದ ಸೊಸೆತನದಲ್ಲಿ ಈಗ ಸಹಸ್ರಾಂಶವೂ ಇಲ್ಲ. ಅತ್ತೆಯ ಬಳ್ಳೀತನವೂ ಬೇವಿನ ಸಿಹಿಯೂ ಇಲ್ಲ. ಎಲ್ಲಿಯೂ ಅತ್ತೆಯಿಲ್ಲದ ಸೊಸೆ ಉತ್ತಮಳು, ಸೊಸೆಯಿಲ್ಲದತ್ತೆ ಗುಣವಂತಳು," ಎಂದೆಂದುಕೊಳ್ಳುತ್ತ ಬೊಗಸೆಯಿಂದ ನದಿಯನೀರನ್ನು ಮೂರು ಸಾರಿ ತೆಗೆದು ಕರೆಯಲ್ಲಿ ಚೆಲ್ಲಿ, ಸ್ವಲ್ಪದೂರ ಹೋಗಿ ಪುನಃ ಮೂರು ಸಾರಿ ಆತ್ಮಪ್ರದಕ್ಷಿಣೆಮಾಡಿಕೊಂಡು ಪಾವಟಿಗೆಗಳನ್ನು ಹತ್ತಿ ಅದೃಶ್ಯವಾದಳು.

ಶೇಷಮ್ಮ—ನಾಲ್ಕುಕಡೆಯೂ ನೋಡಿ ಗಡಗಡನೆ ನಡುಗುತ್ತ "ಅಮ್ಮಾ! ನಾನು ಹೀಗಾಡಿಕೊಂಡೆನೆಂದು ನೀವು ಯಾರಸಂಗಡಲಾದರೂ ಹೇಳೀರಮ್ಮ! ನಮ್ಮತ್ತೆಯವರು ಕೇಳಿದರೆ ನನ್ನನ್ನು ಕೊಂದು ಹಾಕಿಯಾರು. ಈಗಲೇ ನನಗೆ ಕಷ್ಟವಾಗಿದೆ. ಇದು ಕೇಳಿದರೆ ಇನ್ನೂ ಕೇಡಾಗುವುದು. ವೆಂಕಮ್ಮತಾಯಿ! ಈ ಬದುಕು ಬಾಳು

ವುದಕ್ಕಿಂತಲೂ ಗೋದಾವರಿಯಲ್ಲಿ ಬಿದ್ದರೆ ಉತ್ತಮವೆಂದು ತೋರುತ್ತಿದೆ” ಎಂದು ಗೊಳಗೊಳನೆ ಅಳಲು ಪ್ರಾರಂಭಿಸಿದಳು.

ವೆಂಕಮ್ಮ—“ಸುಮ್ಮನಿರು! ಸುಮ್ಮನಿರು! ಅಂತಹ ಅವಾಚ್ಯಗಳನ್ನು ಯಾವಾಗಲೂ ಹೇಳಬಾರದು. ಪ್ರಾಯದವರೆಂದಿಗೂ ಕೆಟ್ಟವರಲ್ಲ” ಎಂದು ಸಮಾಧಾನ ಪಡಿಸಿದಳು.

ಶೇಷಮ್ಮ—ಆಮಾತಿನಿಂದ ದುಃಖವನ್ನು ಬಿಟ್ಟು, “ಗೋದಾವರಿಗೆ ಬಂದು ಬಹಳ ಹೊತ್ತಾಯಿತಮ್ಮಾ! ಇಷ್ಟುಹೊತ್ತು ಏನು ಮಾಡುತ್ತಿದ್ದೆ ಎಂದು ಕೊಂದುಹಾಕುವಳು, ಬೇಗ ಹೋಗಬೇಕು” ಎಂದು ವೇಗವಾಗಿ ನೀರುತುಂಬಿಕೊಂಡು ಬಿಂದಿಗೆಯನ್ನು ಬುಜದ ಮೇಲಿಟ್ಟುಕೊಂಡು ಹೊರಟಳು.

ಆಗ ನೀರಿಗೆ ಬಂದವರಲ್ಲಿ ಇಪ್ಪತ್ತುವರುಷದ ಪ್ರಾಯದವಳೊಬ್ಬಾಕೆ ಹತ್ತಿರದಲ್ಲಿದ್ದ ಮತ್ತೊಬ್ಬಳ ಕತ್ತಿನ ಹತ್ತಿರಕ್ಕೆ ಕೈಚಾಚಿ, “ಕಾಂತಮ್ಮಾ! ಈಅಡ್ಡಿಕೆ ಹೊಸದಾಗಿ ಮಾಡಿಸಿಕೊಂಡೆಯಾ? ನಿನಗೇನು? ನೀನು ಅದೃಷ್ಟವಂತೆಯಾದುದರಿಂದ ತಲೆಯಿಂದ ಪಾದಗಳವರೆಗೂ ನಿನ್ನ ಗಂಡ ನಿನಗೆ ಒಡವೆಗಳನ್ನು ಇಳೇಹಾಕುತ್ತಾನೆ” ಎಂದು ಹೇಳಿದಳು.

ಕಾಂತಮ್ಮ—“ಇನ್ನೂ ನಿನ್ನೆ ಓಜರ ಸುಬ್ಬೈಯ್ಯ ಮಾಡಿ ತಂದನು. ನಾಲ್ಕೆಳೇಕಂಠೀಸರವನ್ನೂ ಮಾಡುತ್ತಿದ್ದಾನೆ. ಪೇರಮ್ಮಾ! ನಿನ್ನ ಗಂಡನಿಗೆ ನಿನ್ನ ಮೇಲೆ ಬಹಳ ಪ್ರೀತಿಯೆಂದು ಕೇಳಿದೇನೆ ನಿಜವಷ್ಟೆ!”

ಪೇರಮ್ಮ—“ಯಾತಕ್ಕೆ ಬಂದ ಪ್ರೀತಿ? ಸಂವತ್ಸರಕ್ಕೊಂದುಸಾರಿಯಾದರೂ ಇಟ್ಟುಕೋ ಎಂದು ಪತ್ತುವರಹದೊಡವೆಯನ್ನು ಮಾಡಿಸಿ ಕೊಡುವುದಿಲ್ಲವಲ್ಲಾ! ಪೂರ್ವಜನ್ಮದಲ್ಲಿ ಮಾಡಿದ ಪಾಪದಿಂದ ನನಗೀ ಜನ್ಮದಲ್ಲಿ ಇಂತಹ—”

ಆಗ ಸಮೀಪದಲ್ಲಿದ್ದ ಮತ್ತೊಬ್ಬಾಕೆ, “ಪೇರಮ್ಮಾ! ನೀನು ವೃಥಾ ಇಲ್ಲದ ವ್ಯಸನವನ್ನು ತಂದುಕೊಳ್ಳುತ್ತೀಯೆ. ನಿನಗೇನಾದರೂ

ಅನ್ನಕ್ಕೆ ಕಡಮೆಯೋ? ಬಟ್ಟೆಗೆ ಕಡಮೆಯೋ? ಮಹರಾಯನಂತೆ ಗಂಡನು ವಿಶ್ವಾಸದಿಂದ ನೋಡುತ್ತಿರುವಾಗ ಒಡವೆಯಿಲ್ಲದಿದ್ದರೇನು? ಗಂಡನಿಗೆ ಪ್ರೇಮವಿಲ್ಲದಿದ್ದರೆ ದಿಕ್ಕಿಲ್ಲದ ಒಡವೆಗಳು ಯಾಕೆ? ಬರೀ ಹೊರೆ ಗೇಡು. ನೋಡು, ನಮ್ಮೂರಲ್ಲಿ ಬಂಗಾರಮ್ಮನಿಗೆ ಮೈತುಂಬ ಎಷ್ಟು ಒಡವೆಗಳವೆ! ಆಒಡವೆಗಳಲ್ಲಿ ಕೆಲವುಗಳ ಹೆಸರನ್ನೇ ನಾನು ಕೇಳಲ್ಲ. ದೀವಿಗೆಯಿಟ್ಟಕೂಡಲೇ ಅವಳ ಗಂಡ ಸೂಳೇಮನೆಗೆ ಹೋಗಿ ಕುಳಿತುಕೊಳ್ಳುವನು. ಅವಳಿಗೇನು ಸೌಖ್ಯ! ನಿನ್ನ ಗಂಡನಾದರೋ ಸಾಯಂಕಾಲವಾದ ಮೇಲೆ ಬೀದಿಯ ಬಾಗಿಲಿನಿಂದ ಹೊರಕ್ಕೆ ಕಾಲಿಡುವುದಿಲ್ಲ."

ಪೇರಮ್ಮ—"ನೀನು ಓದಿಕೊಂಡವಳು, ಆದುದರಿಂದ ಬೇಕಾದಷ್ಟು ಶ್ರೀರಂಗನೀತಿಗಳನ್ನು ಹೇಳಬಲ್ಲೆ. ನಿನ್ನ ಹಾಗೆ ನಮಗೆ ಯಾರಿಗೂ ಇಂತಹ ವೇದಾಂತ ತಿಳಿಯದು. ನಾಲ್ವರು ಒಡವೆಯಿಟ್ಟುಕೊಂಡು ಬಂದಾಗ ಮೋಟುಮರದಂತೆ ಎಲ್ಲಿಗಾದರೂ ಹೋಗುವದಕ್ಕೆ ನನಗೆ ನಾಚಿಕೆಯಾಗುತ್ತದೆ. ಜಾನಕಮ್ಮ! ನಿನಗೆ ನನ್ನ ಗಂಡನಂತಹ ಬಡವ—"

ಜಾನಕಮ್ಮ—"ಪೇರಮ್ಮತಾಯಿ! ನಾನೇನೋ ಅರಿಯದೆ ಹಾಗೆಂದೆ, ಕೋಪಮಾಡಬೇಡ" ಎಂದು ಬಿಂದಿಗೆತುಂಬಿಕೊಂಡು ಹೊರಟಳು.

ಉಳಿದವರೆಲ್ಲರೂ ನೀರುತುಂಬಿಕೊಂಡು ಕೂಡಲೇ ಹೊರಟು "ಎಲೇ! ಪೂಜಾರಿಪಾಪಮ್ಮ ಕೋರೇತುರುಬಿಟ್ಟುಕೊಳ್ಳುತ್ತಾಳೆ," "ಕರಣಿಕರ ಹೆಂಡತಿ ಎಷ್ಟು ವೈಯಾರದಿಂದ ನಡೆಯುತ್ತಾಳೆ ನೋಡಿದೆಯಾ, ?" "ಅಯ್ಯನೋರ ರಾಮಮ್ಮನಿಗೇನು ಗರ್ವವೊ! ಮನುಷ್ಯರ ಸಂಗಡ ಮಾತಾಡುವುದೇ ಇಲ್ಲ," "ಪುಲ್ಲಮ್ಮ ಹಗಲುಹೊತ್ತೇ ಗಂಡನ ಸಂಗಡ ಮಾತಾಡುತಾಳಂತೆ," "ಕನ್ನಮ್ಮನಿಗೆ ಸ್ವಲ್ಪ ಮೆಳ್ಳಗಣ್ಣು," "ಶಾನುಭೋಗರ ಶೀತಮ್ಮನಿಗೇನೂ ಒಡವೆಗಳೇ ಇಲ್ಲ" ಎಂಬುದಾಗಿ ಪರರ ದೋಷಗಳನ್ನೇ ಎಣಿಸಿಕೊಳ್ಳುತ್ತಾ ಪಾವಟಿಗೆಗಳನ್ನು ಹತ್ತಿ ಮನೆಗಳಿಗೆ ನಡೆದರು. ವಿದ್ಯಾಗಂಧವನ್ನೇ ಅರಿಯದ

ಮುಗ್ಧವನಿತೆಯರಿಗೆ ಮಾತಾಡುವುದಕ್ಕೆ ಇವಕ್ಕಿಂತ ಒಳ್ಳೆಯ ವಿಷಯ
ಗಳು ಯಾವುವು ದೊರಕುವುವು? ಅಲ್ಲಿಗೆ ಬರುವ ಸ್ತ್ರೀಯರು ಸಾ
ಧಾರಣವಾಗಿ ಸಂಭಾಷಿಸುವ ಇತರ ವಿಷಯಗಳು ಸವತಿಗಳ ಕಾದಾಟ,
ಮಲತಾಯಿಗಳ ದುರ್ವರ್ತನ, ಗಂಡಂದಿರ ಅನಾದರಣೆ ಮೊದಲಾ
5 ದುವಲ್ಲದೆ ಮತ್ತೆ ಯಾವುದೂ ಇಲ್ಲ.

ಆಗ ಬಲಗೈಯಲ್ಲಿ ತಾಳೆಯೋಲೆಯ ಪಂಚಾಂಗವನ್ನು ಹಿಡಿದು
ಕೊಂಡು, ನೀರ್ಗಾವಿದೋತ್ರವನ್ನುಟ್ಟುಕೊಂಡು, ಮಡಿಸಿದ ಚಿಕ್ಕ
ಅಂಗವಸ್ತ್ರವನ್ನು ಬುಜದಮೇಲೆ ಹಾಕಿಕೊಂಡು, ಮುಖದಮೇಲೂ
ದೇಹದಮೇಲೂ ವಿಭೂತಿಯ ಪಂಡೆಗಟ್ಟುಗಳು ಸ್ಪಷ್ಟವಾಗಿ ಕಾಣಿಸೆ,
10 ನಿಂಬೆಯಕಾಯಗಾತ್ರದ ರುದ್ರಾಕ್ಷಿಗಳ ಕಂಠಮಾಲೆ ಪ್ರಕಾಶಿಸೆ, ನಡು
ವಿನಲ್ಲಿ ಸೆಕ್ಕಿಕೊಂಡಿರುವ ನಸ್ಯದ ಬುರುಡೆಯು ಚಿಕ್ಕ ಗಂತಿಯಂತೆ
ಕಾಣಿಸೆ, ಕರೆಯ ಮೇಲ್ಗಡೆ ಹೋಗುತ್ತ ಗೋದಾವರಿಯಲ್ಲಿ ಸ್ನಾನ
ಮಾಡುತ್ತಿರುವರು ಯಾರೋ ಎಂದು ಕಣ್ಣಿಗೆ ಕೈಯಡ್ಡವಾಗಿಟ್ಟು
ಕೊಂಡು ನಿಧಾನಿಸಿ ನೋಡಿ, ಗಿರುಕ್ಕೆಂದು ತಿರುಗಿ, ಒಬ್ಬ ಬ್ರಾಹ್ಮ
15 ಣನು ಪಾವಟಿಗೆಗಳನ್ನಿಳಿದು ಬಂದನು.

ಬ್ರಾಹ್ಮಣ—"ರುಕ್ಮಿಣಮ್ಮನವರೇ! ಸಂಕಲ್ಪವನ್ನು ಹೇಳು
ತ್ತೇನೆ, ಸ್ನಾನಮಾಡಿ."

ರುಕ್ಮಿಣಿ—"ನಾನು ದುಡ್ಡು ತರಲಿಲ್ಲವಲ್ಲ!"

ಬ್ರಾ.—"ದುಡ್ಡಿಗೇನು? ಮಧ್ಯಾಹ್ನ ಮನೆಗೆ ಬರುತ್ತೇನೆ;
20 ಆಗ ಕೊಡಬಹುದು—(ಎಂದು ಬಗ್ಗಿ ನಿಂತುಕೊಂಡು) ಆಚಮನ
ಮಾಡಿರಿ. ಕೇಶವಾ—ನಾರಾಯಣಾ—ಮಾಧವಾ—ಗೋವಿಂದಾ—ಮೂ
ಡಲು ಮುಖವಾಗಿ ತಿರುಗಿರಿ. ಸೂರ್ಯನಕಡೆ."

ರು.—"ಸ್ನಾನ ಮಾಡಲೋ?"

ಬ್ರಾ.—"ಸಂಕಲ್ಪಹೇಳುತ್ತೇನೆ, ತಾಳಿರಿ" ಎಂದು ಪುಡಿಬುರು
25 ಡೆಯನ್ನು ನಡುವಿನಿಂದ ತೆಗೆದು, ಬಿರಡೆಯನ್ನು ತೆಗೆದು ಎರಡುಸಾರಿ
ನೆಲದಮೇಲೆ ಮೆಲ್ಲಗೆ ಹೊಡೆದು ಎಡಗೈಯಲ್ಲಿ ಸ್ವಲ್ಪ ಪುಡಿಯನ್ನು

ಹಾಕಿಕೊಂಡು, ಮರಳಿ ಮೊದಲಿನಂತೆ ಬಿರಡೆಯನ್ನು ಹಾಕಿ, ಆಕಾಯ
ನ್ನು ದೋತ್ರದಲ್ಲಿ ನಡುವಿಗೆ ಸೆಕ್ಕಿಕೊಂಡು, ಎಡಗೈಯಲ್ಲಿರುವ ಪುಡಿಯ
ನ್ನು ಹೆಬ್ಬೆಟ್ಟಿನಿಂದಲೂ ತರ್ಜನಿಯಿಂದಲೂ ದೊಡ್ಡ ಚಿಟಿಕೆಯಾಗಿ ಹಿಡಿ
ದು, ಬುರ್ರೆಂದು ಹೀರಿ ಮೂಗಿನೆರಡು ರಂಧ್ರಗಳಲ್ಲೂ ಏರಿಸಿ, ಮಿಕ್ಕಿ
ದನ್ನು ಎರಡನೆಯಸಾರಿ ತೆಗೆದುಕೊಂಡು ಕೈಯಲ್ಲಿಟ್ಟುಕೊಂಡು, ಎಡ
ಗೈಯನ್ನು ಉಟ್ಟಿರುವ ಬಟ್ಟೆಗೆ ಸವರಿ, ಮೂಗನ್ನೊರಸಿಕೊಂಡು,
"ಶುಭೇ ಶೋಭನೇ ಮುಹೂರ್ತೇ–ಶ್ರೀಮಹಾವಿಷ್ಣೋರಾಜ್ಞಯಾ
ಪ್ರವರ್ತಮಾನಸ್ಯ–ಆದ್ಯಬ್ರಹ್ಮಣಃ–ದ್ವಿತೀಯಪ್ರಹರಾರ್ಧೇ–ಶ್ವೇತವ
ರಾಹಕಲ್ಪೇ–ವೈವಸ್ವತಮನ್ವಂತರೇ–ಕಲಿಯುಗೇ–ಪ್ರಥಮಪಾದೇ–ಜಂ
ಬೂದ್ವೀಪೇ–ಭರತವರ್ಷೇ–ಭರತಖಂಡೇ–ಅಸ್ಮಿನ್ ವರ್ತಮಾನೇ–
ವ್ಯಾವಹಾರಿಕ ಚಾಂದ್ರಮಾನೇನ–ಕಾಳಯುಕ್ತಿನಾಮ ಸಂವತ್ಸರೇ–ದ
ಕ್ಷಿಣಾಯನೇ–ಶರದೃತೌ–ಕಾರ್ತಿಕಮಾಸೇ–ಕೃಷ್ಣಪಕ್ಷೇ–ದ್ವಾದ
ಶ್ಯಾಂ–ಇಂದುವಾಸರೇ–ಶುಭನಕ್ಷತ್ರ ಶುಭಯೋಗ ಶುಭಕರಣಾದ್ಯನೇ
ಕಗುಣವಿಶಿಷ್ಟಾಯಾಮಸ್ಯಾಂ ಶುಭತಿಥೌ–ಕ್ಷೇಮಸ್ಥೈರ್ಯವಿಜಯಾ
ಯುರಾರೋಗ್ಯೈಶ್ವರ್ಯಾಭಿವೃದ್ಧ್ಯರ್ಥಂ–ಅಖಂಡಗೌತಮಿಸ್ನಾನಮ
ಹಂಕರಿಷ್ಯೇ" ಮೂರುಸಾರಿ ಸ್ನಾನಮಾಡಿರಿ.

ರುಕ್ಮಿಣಿಗೆ ಚೆನ್ನಾಗಿ ಸ್ನಾನಮಾಡುವುದಕ್ಕೆ ರೂಢಿಯಿಲ್ಲವಾ
ದುದರಿಂದ, ಆಳವಾದ ನೀರಿಗೆ ಹೋಗಲು ಭಯಪಟ್ಟು, ಮುಳುಗು
ವುದಕ್ಕಾಗದೆ ಮೊಣಕಾಲುದ್ದದ ನೀರಲ್ಲಿ ಕುಳಿತುಕೊಂಡು ತುರು
ಬನ್ನು ಬಿಚ್ಚಿ ಬೊಗಸೆಯಿಂದ ತಲೆಯಮೇಲೆ ನೀರನ್ನೆರಚಿಕೊಳ್ಳು
ತ್ತಿದ್ದಳು. ಆಗ ಸಂಕಲ್ಪಹೇಳಿದ ಬ್ರಾಹ್ಮಣನು ದುಡ್ಡಿಗೋಸ್ಕರ
ಆಮೇಲೆ ಬರುತ್ತೇನೆಂದು ಹೇಳಿ ಹೊರಟುಹೋದನು. ಅಷ್ಟರಲ್ಲಿ
ರುಕ್ಮಿಣಿ ಸೀರೆಯ ಸೆರಗಿನಿಂದ ಶಿರೋಜಗಳನ್ನೊರಸಿಕೊಂಡು, ಕೊ
ನೆಗಂಟುಹಾಕಿಕೊಂಡು, ಕರೆಯಕಡೆ ನೋಡಿ ದೂರದಿಂದ ಬರುತ್ತಿ
ರುವ ತಂದೆಯನ್ನು ಕಂಡು ಬೇಗಬೇಗ ಹೊರಟು ಕಲ್ಲಿನಮೇಲಿಟ್ಟಿದ್ದ
ಕುಂಕುಮದ ಪೊಟ್ಟಣವನ್ನು ತೆಗೆದುಕೊಂಡು ಹಣೆಯಲ್ಲಿ ಬೊಟ್ಟಿ
ಟ್ಟುಕೊಂಡು, ಎರಡಾವೃತ್ತಿ ಕೈಯಿಂದ ನೀರನ್ನು ಚೆಂಬಿನಮೇಲೆ

ಹೊಯ್ದು ಅದನ್ನು ತೆಗೆದುಕೊಂಡು, ಎರಡು ಹೆಜ್ಜೆ ನದಿಯೊಳಕ್ಕೆ ಹೋಗಿ ನೀರುತುಂಬಿಕೊಂಡು ಬಂದು, ಸೀರೆಯನ್ನು ಸರಿಮಾಡಿ ಕೊಂಡು, ಒಗೆದ ಬಟ್ಟೆಗಳನ್ನು ಭುಜದಮೇಲಿಟ್ಟುಕೊಂಡು ಅವುಗಳ ಮೇಲೆ ನೀರಿನ ಚೆಂಬನ್ನು ಹೊತ್ತುಕೊಂಡು ತನಗೋಸ್ಕರ ಕಾಯ್ದು ಕೊಂಡಿರುವ ಜೋಯಿಸರ ಭಾರ್ಯೆಯ ಸಂಗಡ ಮನೆಗೆ ಹೋಗಲು ಹೊರಟಳು.

---

## ಮೂರನೆಯ ಪ್ರಕರಣ.

ರುಕ್ಮಿಣಿ ಮನೆಗೆ ಹೋಗುವುದು—ಗೃಹವರ್ಣನೆ—ರಾಜಶೇಖರನು ಬಂದು ದಿವಾಣಖಾನೆಯಲ್ಲಿ ಕುಳಿತುಕೊಳ್ಳುವುದು—ಬಂಧುದರ್ಶನ—ಸ್ವಹಸ್ತಪಾಕಿಯಾದ ವೈಶ್ವದೇವಪರನು.

ಸಿದ್ಧಾನ್ತಿಯವರ ಭಾರ್ಯೆಯೂ ರುಕ್ಮಿಣಿಯೂ ಹೊರಟು ಸೋಪಾಗಳನ್ನು ಹತ್ತಿ ಬೀದಿಯಲ್ಲಿ ದೇವಾಲಯದವರೆಗೂ ನೆಟ್ಟಗೆ ನಡೆದು, ಅಲ್ಲಿಂದ ಬಲಗಡೆಯ ಬೀದಿಯಲ್ಲಿ ಇನ್ನೂ ಕೊಂಚ ದೂರ ಹೋದ ತರುವಾಯ, ರುಕ್ಮಿಣಿ ಮೂಡಲುಕಡೆಯ ಸಂದಿನಲ್ಲಿ ಎರಡು ಹೆಜ್ಜೆಯಿಟ್ಟು ನಿಂತುಕೊಂಡು ಹಿಂದುಗಡೆ ತಿರುಗಿ ಎರಡುಸಲ ಮೆಲ್ಲಗೆ ಕೆಮ್ಮುತ್ತಲೆ ಸಿದ್ಧಾನ್ತಿಯವರ ಭಾರ್ಯೆಯೂ ನಿಂತುಕೊಂಡು "ಅಮ್ಮಾಯೀ ! ನಾನಿರಲೆ ?" ಎಂದು ಹಿಂದಿರುಗಿ ಕೇಳಿದಳು.

ರುಕ್ಮಿಣಿ—"ಒಳ್ಳೇದು ; ಸೋಮಿದೇವಮ್ಮನವರೇ ! ನನಗೋಸ್ಕರ ನೀವು ಮನೆಗೆ ಹೋಗುವುದಕ್ಕೆ ಸುತ್ತಾಯಿತಲ್ಲವೆ ?"

ಸೋ.—"ಎಷ್ಟುಸುತ್ತು ? ನಿಮಿಷದಲ್ಲಿ ಹೋಗುತ್ತೇನೆ."

ರು.—"ಹೋಗಿಬನ್ನಿ."

ಸೋ.—"ನಾವು ಬಡವರು. ನಮ್ಮಮೇಲೆ ದಯೆಯಿಡಬೇಕಮ್ಮಾ."

ರು.—"ಅದಕ್ಕೇನು ? ಹೋಗಿಬನ್ನಿ" ಎಂದು ನಾಲ್ಕುಹೆಜ್ಜೆ ನಡೆದು ಮರಳಿ ಹಿಂದಿರುಗಿ "ಸೋಮಿದೇವಮ್ಮನವರೇ ! ಹೇಳುವು

ದನ್ನು ಮರೆತೆ. ಸಾಯಂಕಾಲ ದೇವಸ್ಥಾನಕ್ಕೆ ಹೋಗುವಾಗ ನೀವು ಬರುವಿರಲ್ಲವೆ ? ”

ಸೋ—“ ಅಗತ್ಯವಾಗಿ ಬರುವೆನು. ನಾನು ಹೋಗಿ ಬರಲೇ ? ” ಎಂದು ಸೋಮಿದೇವಮ್ಮನು ಹೊರಟಳು.

ಸಿದ್ಧಾನ್ತಿಯವರಾಗಲಿ ಅವರ ಹಿರಿಯರಾಗಲಿ ಯಾವಾಗಲೂ ಯಜ್ಞಮಾಡಿದವರಾಗದಿದ್ದರೂ, ಸೋಮಿದೇವಮ್ಮನ ತೌರುಮನೆಯವರಲ್ಲಿ ಮಾತ್ರ ಯಜ್ಞಮಾಡಿದವರು ಇರದೇ ಇರಲಿಲ್ಲ. ಸಾಕ್ಷಾತ್ತಾಗಿ ಆಕೆಯ ಪಿತಾಮಹನೇ ಯಜ್ಞಮಾಡಿ ವರುಷಕ್ಕೊಂದರಮೇರೆ ಮೂವತ್ತನಾಲ್ಕು ಶ್ರಾವಣಪಶುಗಳನ್ನು ಬಂಧಿಸಿ ಆಮೇಲೆ ಸ್ವರ್ಗಸುಖವನ್ನನುಭವಿಸುವುದಕ್ಕೋಸ್ಕರ ಹೋದನು. ಸೋಮಿದೇವಮ್ಮನ ತಂದೆ ಯಜ್ಞಮಾಡದಿದ್ದರೂ, ತಂದೆ ಎಷ್ಟೋ ಧನವ್ಯಯಮಾಡಿ ಸಂಪಾದಿಸಿದ ಹೆಸರುಗಳನ್ನು ಮಾತ್ರ ಹೋಗಲಾಡಿಸಲಿಷ್ಟವಿಲ್ಲದವನಾಗಿ ತನ್ನ ಮಗನಿಗೆ ಸೋಮಯಾಜಿಯೆಂದೂ ಮಗಳಿಗೆ ಸೋಮಿದೇವಮ್ಮನೆಂದೂ ನಾಮಕರಣಮಾಡಿದ್ದನು. ರುಕ್ಮಿಣಿ ಆಸಂದಿನಲ್ಲಿ ನೂರುಮಾರು ನಡೆದು ಅಲ್ಲಿಂದ ದಕ್ಷಿಣಕ್ಕೆ ತಿರುಗಿ, ಆಸಂದಿನಲ್ಲೆರಡು ಬಾಗಿಲುಗಳನ್ನು ದಾಟಿ ಹಿತ್ತಿಲುದಾರಿಯಿಂದ ಮೂರನೆಯ ಮನೆಯನ್ನು ಪ್ರವೇಶಿಸಿದಳು.

ರಾಜಶೇಖರನ ಮನೆ ಆಕಾಲದ ಮನೆಗಳಲ್ಲಿ ಕೇವಲಸುಂದರವಾದುದು. ಬೀದಿಯ ಬಾಗಿಲಿನೆರಡುಕಡೆಯಲ್ಲೂ ಎರಡು ದೊಡ್ಡ ಜಗಲಿಗಳಿರುವುವು. ಆಯೆರಡುಜಗಲಿಗಳಿಗೂ ನಡುವೆ ಒಳಕ್ಕೆ ಹೋಗುವ ದಾರಿಯಿರುವುದು. ಅದರಿದಿರಿಗೆ ಸಿಂಹದ್ವಾರವಿರುವುದು. ಅದರ ದ್ವಾರಬಂಧದ ಪಟ್ಟಿಗೆಗಳ ಕೆಳಭಾಗದಲ್ಲಿ ಆನೆಯ ತಲೆಯ ಮೇಲೆ ಸಿಂಹವು ಕುಳಿತುಕೊಂಡು ಕುಂಭಸ್ಥಲಗಳನ್ನು ಬಗಿಯುವಂತೆ ಚಿತ್ರ ಕೆತ್ತಲ್ಪಟ್ಟಿರುವುದು. ಎರಡುಕಡೆಯಲ್ಲೂ ಇರುವಾಸಿಂಹಗಳ ಶಿರೋಭಾಗಮೊದಲ್ಗೊಂಡು ಮೇಲ್ಪಟ್ಟಿಯವರೆಗೂ ಹೂಗಳೂ ಕಾಯಿಗಳೂ ಉಳ್ಳ ಲತೆಗಳು ಕೆತ್ತಲ್ಪಟ್ಟಿರುವುವು. ಈಪಟ್ಟಿಗೆಗಳ ಮೇಲೆ ಎರಡುಕಡೆಗಳಲ್ಲೂ ಮರಗುದುರೆಗಳು ಬೀದಿಯಕಡೆಗೆ

ಮೊಣಗಾಲ್ಗಳನ್ನು ಚಾಚಿಕೊಂಡು ನೋಡುವರ ಮೇಲಕ್ಕೆ ದುಮಿಕಿ
ಬರುವಂತೆ ಕಾಣಿಸುವುವು. ಈಕುದುರೆಗಳ ಕಾಲ್ಗಳಿಗೆ ಶುಭದಿನ
ಗಳಲ್ಲಿ ಮಾವಿನೆಲೆದೋರಣಗಳನ್ನು ಕಟ್ಟುವರು. ಈಯೆರಡು ಕುದು
ರೆಗಳಿಗೂ ನಡುವೆ ಇರುವ ಮೇಲ್ಪಟ್ಟಿಯ ಮೇಲೆ ಮಧ್ಯೇ ಒಂದು
5 ಪದ್ಮವೂ ಅದರಿಕ್ಕಡೆಗಳಲ್ಲಿ ಕುದುರೆಗಳವರೆಗೂ ಚಿತ್ರಾ
ದೆಲೆಗಳೂ ಹೂಗಳೂ ಉಳ್ಳ ಬಳ್ಳಿಯೂ ಕೆತ್ತಲ್ಪಟ್ಟಿರುವುವು.
ಆಬಳ್ಳಿಯಮೇಲೆ ಕಾಲಿಟ್ಟುಕೊಂಡು ಹಣ್ಣುಗಳನ್ನು ಮೂಗಿನಿಂದ
ಕಚ್ಚುವಂತೆ ನಡುನಡುವೆ ಗಿಣಿಗಳು ಚಿತ್ರಿಸಲ್ಪಟ್ಟಿರುವುವು. ಬೀದಿಯ
ಕದಕ್ಕೆ ಬಲವಾದ ಗ್ರಂಥಿಗಳು ಹಾಕಲ್ಪಟ್ಟು, ಅವುಗಳ ಮೇಲೂ
10 ಒಂದು ವಿಧವಾದ ಪುಷ್ಪಲತೆ ಕೆತ್ತಲ್ಪಟ್ಟಿರುವುದು.

ಬಾಗಿಲನ್ನು ದಾಟಿ ಒಳಕ್ಕೆ ಹೋದರೆ ಅಲ್ಲೊಂದು ಹಜಾ
ರವಿರುವುದು. ಆಹಜಾರದ ಮುಂದೆ ಒಂದು ತೊಟ್ಟಿಯಿರುವುದು.
ಮಳೆಸುರಿಯುವಾಗ ನಾಲ್ಕು ಕಡೆಯಿಂದಲೂ ಬರುವ ಸೂರಿನ ನೀರು
ಆತೊಟ್ಟಿಯಲ್ಲಿ ಬಿದ್ದು ಬೀದಿಯ ಕಡೆಯ ಹಜಾರದ ಕೆಳಗಿರುವ ತೂಬಿ
15 ನಿಂದ ಬೀದಿಗೆ ಹೋಗುವುದು. ಆತೊಟ್ಟಿಗುತ್ತರದಕಡೆಯಲ್ಲೂ
ದಕ್ಷಿಣದಕಡೆಯಲ್ಲೂ ಇದಿರುಬದಿರಾಗಿ ಎರಡು ಹಜಾರೆಗಳಿರುವುವು.
ಅವುಗಳಲ್ಲಿ ದಕ್ಷಿಣದಕಡೆ ಇರುವುದು ದಿವಾಣಖಾನೆ. ಅದರೊಳಗೆ
ವಿವಾಹಾದಿಕಾಲಗಳಲ್ಲಿ ನಂಟರೂ ದೊಡ್ಡಮನುಷ್ಯರೂ ಸಭೆಮಾಡಿ
ಕುಳಿತಿರುವಾಗ ಕೆಳಗಡೆ ಸೂಳೆಯರ ಮೇಳ ನಡೆಯುತ್ತಿರುವುದು.
20 ಇತರಕಾಲಗಳಲ್ಲಿ ದೊಡ್ಡಮನುಷ್ಯರು ನೋಡಬಂದಾಗಲೂ, ಮಧ್ಯಾ
ಹ್ನದ ಊಟವಾದಮೇಲೆ ಪುರಾಣಕಾಲಕ್ಷೇಪ ನಡೆಯುವಾಗಲೂ,
ಶಿಷ್ಯರು ಓದಿಕೊಳ್ಳುವಾಗಲೂ, ರಾಜಶೇಖರನು ಅಲ್ಲಿ ಕುಳಿತು
ಕೊಳ್ಳುವನು. ಆಹಜಾರಕ್ಕಿಕ್ಕಡೆಗಳಲ್ಲೆರಡುಕೊಠಡಿಗಳಿರುವುವು.
ಆಹಜಾರದ ದಕ್ಷಿಣದಕಡೆಯ ಗೋಡೆಯುದ್ದಕ್ಕೂ ರೆಕ್ಕೆಯಕದಗ
25 ಳಿದ್ದು, ತೆರೆದಾಗೆಲ್ಲ ಸಭೆಯವರ ಬೆವರಾರಿಸುವ ಮಲಯಮಾರುತವ
ನ್ನೊಳಕ್ಕೆ ಬಿಡುವುವು. ಆಕದಗಳಹಿಂದೊಂದುಕೈಸಾಲೆಯೂ ಅದ
ರಾಚೆ ಅನೇಕವಿಧವಾದ ಹೂವಿನ ಗಿಡಗಳಿಂದ ನೇತ್ರಗಳನ್ನಾನಂ

ದಪಡಿಸುವ ಚಿಕ್ಕ ಹಿತ್ತಿಲೂ ಇರುವುವು. ಆಹಜಾರದಲ್ಲಿ ಮೂರು
ಗೋಡೆಗಳಿಗೂ ಆಳುದ್ದದಮೇಲೆ ದೊಡ್ಡ ಪಟಗಳು ಕಟ್ಟಲ್ಪಟ್ಟಿರು
ವುವು. ಅವುಗಳಲ್ಲಿ ದಶಾವತಾರಗಳು ಮಾತ್ರವಲ್ಲದೆ ಸೀರೆಗಳನ್ನೆ
ತ್ತಿಕೊಂಡುಹೋಗಿ ಸುರಹೊನ್ನೆಯಗಿಡದಮೇಲೆ ಕುಳಿತುಕೊಂಡಿ
ರುವ ಕೃಷ್ಣನಿಗೆ ಗೋಪಸ್ತ್ರೀಯರು ಕೈಯೆತ್ತಿ ಮುಗಿಯುವಂತೆ 5
ಯೂ, ಬೆಣ್ಣೆಯನ್ನು ಕದ್ದುದಕ್ಕಾಗಿ ತಾಯಿ ಒರಳಿಗೆ ಕಟ್ಟಿಹಾ
ಕಲು ಕೃಷ್ಣನು ಅದನ್ನೆಳೆದುಕೊಂಡು ಹೋಗಿ ಮತ್ತಿಯ ಗಿಡಗ
ಳನ್ನು ಕೆಡವಿದಂತೆಯೂ, ಇನ್ನೂ ಅನೇಕವಿಧವಾದ ಕೃಷ್ಣಲೀಲೆ
ಗಳು ಇರುವ ಪಟಗಳೂ, ಕುಮಾರಸ್ವಾಮಿ ತಾರಕಾಸುರನನ್ನು
ಕೊಲ್ಲುತಿರುವಂತೆಯೂ, ಪಾರ್ವತಿ ಮಹಿಷಾಸುರನನ್ನು ವಧಿಸುವಂ 10
ತೆಯೂ, ಶಿವನು ತ್ರಿಪುರಸಂಹಾರಮಾಡುವಂತೆಯೂ ಇರುವ ಶಿವಸಂ
ಬಂಧವಾದ ಪಟಗಳೂ, ವಿಘ್ನೇಶ್ವರ, ಸರಸ್ವತಿ, ಗಜಲಕ್ಷ್ಮಿ, ಚತು
ರ್ಮುಖ ಮೊದಲಾದ ಮತ್ತೆ ಕೆಲವು ಪಟಗಳೂ ಗೋಡೆಗಳನ್ನಲಂಕರಿ
ಸುತ್ತಿರುವುವು. ಉತ್ತರದ ಕಡೆಯ ಹಜಾರವೂ ಈರೀತಿಯಲ್ಲೇ ಇರು
ವುದಾದರೂ ಗೋಡೆಗೊಂದುಬಾಗಿಲುಮಾತ್ರ ಇದ್ದು ಯಾವಾಗಲೂ 15
ಮುಚ್ಚಲ್ಪಟ್ಟಿರುವುದು. ಈ ಹಜಾರದಲ್ಲೆರಡುಮೂರು ಹಳೆಯ
ಮೇನಾಗಳು ಯಾವಾಗಲೂ ಮೇಲಕ್ಕೆ ಕಟ್ಟಲ್ಪಟ್ಟಿರುವುವು. ರಾಜ
ಶೇಖರನು ಆಗಾಗ ಗ್ರಾಮಾಂತರಗಳಿಗೆ ಹೋಗುವಾಗಲೂ ದೊಡ್ಡ
ಮನುಷ್ಯರು ಯಾರಾದರೂ ಆಗಾಗ ಎರವು ಕೇಳುವಾಗಲೂ ಉಪ
ಯೋಗಿಸುವ ಹೊಸಮೇನಾಮಾತ್ರ ಬುರಕಿಹಾಕಲ್ಪಟ್ಟು ಹಜಾ 20
ರದಲ್ಲಿ ನೆಲದ ಮೇಲೆ ಪಡುವಣ ಗೋಡೆಯ ಹತ್ತಿರ ಇಡಲ್ಪಟ್ಟಿರು
ವುದು. ಈಹಜಾರದ ಗೋಡೆಯಲ್ಲಿರುವ ಕದವನ್ನು ತೆರೆದು ಉತ್ತ
ರದ ಕೈಸಾಲೆಗೆ ಹೋದರೆ ಹಿತ್ತಿಲಲ್ಲೊಂದು ದೊಡ್ಡಬಾವಿ ಕಾಣ
ಬರುವುದು. ನೆರೆಹೊರೆಯವರು ಸದಾ ಆಬಾವಿಯಲ್ಲಿ ನೀರುಸೇದಿ
ಕೊಂಡು ಹೋಗುತ್ತಿರುವುದರಿಂದ ಅದರಮೇಲಿನ ರಾಟಣದ ಗಾಲಿಗ 25
ಳಾವಾಗಲೂ ಕೀಚುಧ್ವನಿಮಾಡುತ್ತಿರುವುವು. ಆಬಾವಿಗೆ ಪಡುವ
ಲುಕಡೆ ದನಸವನ್ನು ತುಂಬುವ ಪಣತೆಗಳೆರಡು ಅಂಗಳಕ್ಕೆ ಸೇರ

ದಂತೆ ಪ್ರತ್ಯೇಕವಾಗಿ ಕಟ್ಟಲ್ಪಟ್ಟಿರುವುವು. ಬಾವಿಗೆ ಸಮೀಪದಲ್ಲೇ ಬೀದಿಗೆ ಹೋಗುವ ಬಾಗಿಲೊಂದಿರುವುದು. ರುಕ್ಮಿಣಿ ಒಳಕ್ಕೆ ಬಂದುದಾದ್ವಾರದಲ್ಲೇ. ಆಬಾಗಿಲಲ್ಲೇ ನೆರೆಹೊರೆಯವರು ಬಂದು ನೀರುಸೇದಿಕೊಂಡು ಹೋಗುವುದು. ಮಧ್ಯಾಹ್ನಸಮಯದಲ್ಲಿ ಸುತ್ತುಮುತ್ತಲಿರುವ ಸ್ತ್ರೀಯರು ಬರುವಾಗಲೂ ರಾಜಶೇಖರನು ದಿವಾನ್‌ಖಾನೆಯಲ್ಲಿ ಕುಳಿತುಕೊಂಡಿರುವಾಗ ಮನೆಯ ಹೆಂಗಸರು ಹೊರಕ್ಕೆ ಹೋಗಬೇಕಾದಾಗಲೂ ಆದಾರಿಯಲ್ಲೇ ಬಂದು ಹೋಗುತ್ತಿರುವರು.

ಮಧ್ಯದಲ್ಲಿರುವ ಕೊಳದ ನಾಲ್ಕುಕಡೆಯಲ್ಲೂ ಹಲಸಿನಕಾಯಿಮಾಟದ ಬೋದಿಗೆಗಳುಳ್ಳ ಕಂಭಗಳಿರುವುವು. ಬೀದಿಯಕಡೆಯ ಹಜಾರಕ್ಕೆದಿರಾಗಿರುವ ಪಡುವಲುಕಡೆಯ ಹಜಾರದಲ್ಲಿ ಒಳಕ್ಕೆ ಹೋಗುವ ಬಾಗಿಲೊಂದಿರುವುದು. ಆಬಾಗಿಲಲ್ಲೊಳಕ್ಕೆ ಹೋದರೆ ಮತ್ತೊಂದು ಹಜಾರವಿರುವುದು. ಆಹಜಾರದ ದಕ್ಷಿಣದಕಡೆಯಲ್ಲೊಂದು ಬಾಗಿಲಿರುವುದು. ಆದ್ವಾರದಿಂದೊಳಕ್ಕೆ ಹೋದರೆ ರಾಜಶೇಖರನು ಮಲಗುವ ಮನೆಯೊಳಗೆ ಪ್ರವೇಶಿಸುವೆವು. ಆಚಿಕ್ಕ ಮನೆಯ ಉತ್ತರದ ಗೋಡೆಯುದ್ದಕ್ಕೂ ಪೂರ್ವದಿಂದ ಪಶ್ಚಿಮಕ್ಕೆ ಚಪ್ಪರದ ಪಟ್ಟೆಯಮಂಚವು ಕಲ್ಲುಗಳಮೇಲೆ ನಾಲ್ಕು ಕಾಲುಗಳನ್ನು ಹೊರಿಸಿ ಇಡಲ್ಪಟ್ಟಿರುವುದು. ಮಂಚದಸುತ್ತಲೂ ಸೊಳ್ಳೆಯ ಫರದೆಯೂ ಜಾಲರಿಯೂ ಹಾಕಲ್ಪಟ್ಟಿರುವುವು. ಮಂಚದ ಕಂಭಗಳ ನಡುವೆ ಅರಗಿನಬಣ್ಣದ ತಟ್ಟೆಗಳೂ ಬರಣಿಗಳೂ ಇರುವುವು. ಚಪ್ಪರದ ಕೆಳಗಡೆ ಅರಗಿನ ಕಾಯಿಗಳೂ ಹೂಗಳೂ ಉಳ್ಳ ಗಿಡಗಳ ಚಪ್ಪರವೊಂದು ಕಟ್ಟಲ್ಪಟ್ಟಿರುವುದು. ಗೋಡೆಗಳಿಗೆ ಬೆಳ್ಳಗೆ ಸುಣ್ಣ ಹಚ್ಚಲ್ಪಟ್ಟಿರುವುದು. ರುಕ್ಮಿಣಿಯೂ ಆಕೆಯ ತಾಯೂ ಅಕ್ಕರೆಯಿಂದ ಹೊಲಿದ ಚೀಲಗಳು ಗೋಡೆಯುದ್ದಕ್ಕೂ ಕಟ್ಟಲ್ಪಟ್ಟಿರುವುವು. ಆಗೋಡೆಯ ಸಂಚಿಗಳಿಗೆ ಕೊಂಚ ಮೇಲ್ಗಡೆಯಲ್ಲಿ ಬಟ್ಟೆಯ ಗಿಣಿಗಳು ದಾರದಿಂದ ಹಗ್ಗಕ್ಕೆ ಕಟ್ಟಲ್ಪಟ್ಟು ಗಾಳಿಗೆ ಸುಂದರವಾಗಿ ಕದಲುತಿರುವುವು. ಗೋಡೆಗಳಿಗೆ ದೊಡ್ಡ ಮೊಳೆಗಳ ಹೊಡೆದು

ಅವುಗಳ ಮೇಲಿಟ್ಟಿರುವ ಹಲಗೆಗಳ ಮೇಲೆ ಕೊಂಡಪಲ್ಲಿಯ ಬೊಂಬೆ
ಗಳೂ ಅರಗಿನ ಕುಡಿಕೆಗಳೂ ಅಲಂಕಾರಭೂತವಾಗಿರುವುವು. ಗೋ
ಡೆಯ ಚೀಲಗಳು ಹಾಕಿರುವ ಮೊಳೆಗಳಿಗೆ ದಶಾವತಾರಗಳು ಮುಂ
ತಾದ ಪಟಗಳು ಹಾಕಲ್ಪಟ್ಟಿರುವುವು. ದಕ್ಷಿಣದಗೋಡೆಗೆ ಶ್ರೀರಾಮರ
ಪಟ್ಟಾಭಿಷೇಕದ ಪಟವು ಕಟ್ಟಲ್ಪಟ್ಟಿರುವುದು. ರಾಜಶೇಖರನು
ನಿದ್ದೆಯಿಂದೇಳುತ್ತಲೇ ಅದನ್ನು ನೋಡಿದಹೊರತು ಮತ್ತೊಂದು
ವಸ್ತುವನ್ನು ನೋಡನು. ಕೊಠಡಿಯ ಮೇಲ್ಗಡೆಗೆ ಹಲಗೆಗಳಿಂದ
ತಃಖ್ತ ಪೋಷ್ ಮಾಡಲ್ಪಟ್ಟಿರುವುದು. ಮಂಚಕ್ಕಿದಿರಾಗಿ ದಕ್ಷಿಣದಕಡೆ
ಗೋಡೆಯುದ್ದಕ್ಕೂ ಗಡಗಂಚಿಯಮೇಲೆ ಪರಿಸೆಯಾಗಿ ಬಿದಿರಿನ
ಪೆಟ್ಟಿಗೆಗಳಿಡಲ್ಪಟ್ಟಿರುವುವು. ಆಪೆಟ್ಟಿಗೆಗಳಲ್ಲಿ ಸಾಧಾರಣವಾಗಿ ಧರಿಸಿ
ಕೊಳ್ಳುವ ವಸ್ತ್ರಗಳೂ ನಾಗರಲಿಪಿಯಿಂದ ಬಂಗಾಳಿಕಾಗದದ ಮೇಲೆ
ಬರೆದಿದ್ದ ರಾಜಶೇಖರನ ಸಂಸ್ಕೃತಪುಸ್ತಕಗಳೂ ಇಡಲ್ಪಟ್ಟಿರುವುವು.
ಕೊಠಡಿಯ ಪಡುವಲು ಗೋಡೆಯಕಡೆ ದೊಡ್ಡ ಪೆಟ್ಟಿಗೆಯೊಂದು
ಬಲವಾದ ಬೀಗಹಾಕಲ್ಪಟ್ಟಿರುವುದು. ಅದರೊಳಗಿರುವ ಚಿಕ್ಕಪೆ
ಟ್ಟಿಗೆಗಳಲ್ಲಿ ಹಬ್ಬದ ದಿನಗಳಲ್ಲಿ ಧರಿಸುವ ವಸ್ತ್ರಗಳೂ ಒಡವೆಗಳೂ
ರೊಕ್ಕವೂ ಇರುವುವು. ಕತ್ತಲೆಗಾಲದಲ್ಲೂ ಕಳ್ಳರ ಭಯ ವಿಶೇಷ
ವಾಗಿರುವಾಗಲೂ ರಾಜಶೇಖರನು ಆದೊಡ್ಡ ಪೆಟ್ಟಿಗೆಯ ಮೇಲೆಯೇ
ಹಾಸಿಗೆ ಹಾಸಿಕೊಂಡು ಮಲಗುವನು. ದೊಡ್ಡ ಪೆಟ್ಟಿಗೆಗೂ ಇತರ
ಪೆಟ್ಟಿಗೆಗಳಿಗೂ ನಡುವೆ ದಕ್ಷಿಣದ ಕಡೆ ಹಿತ್ತಿಲಿಗೆ ಹೋಗುವ ಮಾರ್ಗ
ವೊಂದಿರುವುದು. ಆದಾರಿಯಿಂದ ಹಿತ್ತಿಲಿಗೆ ಪ್ರವೇಶಿಸುತ್ತಲೇ ವಿಶಾಲ
ವಾಗಿ ಹರಡಿಕೊಂಡಿರುವ ಸೇವಂತಿಗೆ ಗಿಡಗಳು ಹೊಂಬಣ್ಣದ ಹೂಗ
ಳಿಂದಲೂ ಮೊಗ್ಗುಗಳಿಂದಲೂ ನೇತ್ರೋತ್ಸವಮಾಡುತ್ತಿರುವುವು. ಅದ
ಕ್ಕೆಡಗಡೆ ಕೊಂಚದೂರದಲ್ಲಿ ಮಲ್ಲಿಗೆಯ ಬಳ್ಳಿ ಚಪ್ಪರದ ಮೇಲೆ
ಹಬ್ಬಿಕೊಂಡು ಅಕಾಲವಾದುದರಿಂದ ಆಗ ಪುಷ್ಪಿಸದಿದ್ದರೂ ಹಚ್ಚ
ನೆಯ ಕಾಂತಿಯನ್ನೀಯುತ್ತ ಮನೋಹರವಾಗಿರುವುದು.

ರಾಜಶೇಖರನು ಮಲಗುವ ಮನೆಯ ಮುಂದಣ ಹಜಾರದಲ್ಲಿ
ತೊಲೆಗೆ ಗಿಣಿಯ ಪಂಜರವೊಂದು ತಗಲುಹಾಕಿರುವುದು. ಅದರಲ್ಲಿ

ರುವ ಗಿಣಿ ಸದಾ "ಅದಾರು ? ಅದಾರು?" "ಬೆಕ್ಕು ಬಂತು ಹೊಡಿ
ಹೊಡಿ," "ಸೊಪ್ಪವ್ವಾ ತೋಟದ ಸೊಪ್ಪು" ಮುಂತಾದ ಮಾತುಗ
ಳನ್ನು ಸಹಜಮಧುರಸ್ವನದಿಂದ ಕೂಗುತ್ತಿರುವುದು. ಮತ್ತೆ ಕೊಂ
ಚದೂರದಲ್ಲಿ ಅದೇ ತೊಲೆಗೆ ರಾಮಾಯಣ ಮುಂತಾದ ತಾಳೆಯೋ
ಲೆಯ ಪುಸ್ತಕಗಳು ಹುರಿಗಳಿಂದ ಮೇಲಕ್ಕೆ ಕಟ್ಟಲ್ಪಟ್ಟಿರುವುವು.
ಮುಂಜಾವಕ್ಕೆ ನಿದ್ದೆಯಿಂದೆದ್ದು ರುಕ್ಮಿಣಿ ಗಿಣಿಯನ್ನು ಪಂಜರದಿಂದ
ಹೊರಗೆ ತೆಗೆದು ಕೈಮೇಲೆ ನಿಲ್ಲಿಸಿಕೊಂಡು "ಚೇತಿವೆನ್ನಮುದ್ದ"
ಮೊದಲಾದ ಪದ್ಯಗಳನ್ನು ಕೂಡ ನಿತ್ಯವೂ ಕಲಿಸುತ್ತಿರುವಳು.
ಆಕಾಲದಲ್ಲಿ ವಿಶೇಷವಾಗಿ ಸ್ತ್ರೀಯರೋದಿಕೊಳ್ಳುವ ಪದ್ಧತಿಯಿಲ್ಲದಿ
ದ್ದರೂ ರಾಜಶೇಖರನು ತನ್ನ ಮಗಳಮೇಲಿನ ಪ್ರೀತಿಯಿಂದ ತಾನೇ
ರುಕ್ಮಿಣಿಗೆ ಹೊಸ ಪುಸ್ತಕವನ್ನು ಅನ್ಯಸಹಾಯವಿಲ್ಲದೆ ಅರ್ಥಮಾಡಿ
ಕೊಳ್ಳುವ ಶಕ್ತಿಯುಂಟಾಗುವಷ್ಟರವರೆಗೂ ವಿದ್ಯೆಯನ್ನು ಹೇಳಿ
ದ್ದನು. ಆಕೆ ಸ್ವಭಾವವಾಗಿಯೇ ತಿಳಿವುಳ್ಳವಳಾದುದರಿಂದಲೇ ವಿದ್ಯೆ
ಕೂಡಾ ಆಕೆಗೆ ಸಹಾಯವಾಗಿ ಚಿಕ್ಕತನದಲ್ಲೇ ಯುಕ್ತಾಯುಕ್ತವಿವೇ
ಕವನ್ನೂ ಜ್ಞಾನವನ್ನೂ ಉಳ್ಳವಳಾದಳು. ತಂದೆ ಅವಳಿಗೆ ವಿದ್ಯೆ
ಯನ್ನು ಕಲಿಸುವುದನ್ನು ನೋಡಿ ಅಸೂಯೆಯಿಂದ ನೆರೆಹೊರೆಯ
ವರು ಗುಟ್ಟಾಗಿ ಗುಸಗುಸ ಆಡಿಕೊಳ್ಳುತ್ತಿರುವರಲ್ಲದೆ, ರಾಜಶೇಖರನು
ಧನಿಕನಾದುದರಿಂದ ಏನು ಹೇಳಲೂ ಧೈರ್ಯವಿಲ್ಲದವರಾಗಿದ್ದರು. ಹಾ
ಗೆಂದು ಅವರು ಶುದ್ಧಾಂಗವಾಗಿ ಸುಮ್ಮನೆ ಇರಲಿಲ್ಲ. ದೊಡ್ಡಮ
ನುಷ್ಯನೆಂದು ರಾಜಶೇಖರನು ಗೌರವದಿಂದ ನೋಡುತ್ತಿದ್ದ ಒಬ್ಬ
ಆಪ್ತಬಂಧುವನ್ನು ಮೆಲ್ಲಗೆ ಪ್ರೇರೇಪಿಸಿ, ಆತನಿಂದ ಎಲ್ಲರೂ ಸಭೆ
ಯಲ್ಲಿ ಕುಳಿತಿರುವಾಗ "ಅಯ್ಯಾ! ನಮ್ಮಮನೆಯಲ್ಲಿ ಹೆಣ್ಣುಹು
ಡುಗರನ್ನೋದಿಸುವ ಸಂಪ್ರದಾಯವಿಲ್ಲವಲ್ಲಾ ! ನಮ್ಮ ರುಕ್ಮಿಣಿಗೇ
ತಕ್ಕೋದಿಸುತ್ತೀಯೆ ?" ಎನ್ನಿಸಿದರು. ರಾಜಶೇಖರನು ವಿದ್ಯೆ
ಯಿಂದಾಗುವ ಪ್ರಯೋಜನಗಳನ್ನರಿತವನಾದುದರಿಂದಲೂ ಸ್ತ್ರೀ
ವಿದ್ಯೆ ಯಾವ ಶಾಸ್ತ್ರದಲ್ಲೂ ನಿಷೇಧಿಸಲ್ಪಡದಿರುವುದನ್ನೂ ಪೂರ್ವ
ಕಾಲದ ಪತಿವ್ರತೆಯರೆಲ್ಲರೂ ವಿದ್ಯಾವತಿಗಳಾಗಿದ್ದರೆಂಬುದನ್ನೂ ಅರಿತ

ವನಾದುದರಿಂದಲೂ ಆವೃದ್ಧನ ವಾಕ್ಯಗಳನ್ನು ಲಕ್ಷ್ಯಮಾಡದೆ ಸ್ತ್ರೀ
ವಿದ್ಯಾಭ್ಯಾಸಕ್ಕನುಕೂಲವಾಗಿ ಕೆಲವು ಸ್ಮೃತಿವಾಕ್ಯಗಳನ್ನು ಹೇಳಿ
ನಿಮ್ಮಭಿಪ್ರಾಯವೇನೆಂದು ಸಭೆಯಲ್ಲಿದ್ದವರನ್ನು ಕೇಳಿದನು. ಅವ
ರೆಲ್ಲರೂ ಸ್ತ್ರೀವಿದ್ಯೆಯೆಂದಮಾತ್ರದಿಂದಲೇ ಅಸಹ್ಯಪಡುವರಾದರೂ
ರಾಜಶೇಖರನಭಿಪ್ರಾಯತಿಳಿದಮೇಲೆ ಅದಕ್ಕೆ ವ್ಯತಿರೇಕವಾಗೇನೂ
ಹೇಳುವುದಕ್ಕಭ್ಯಾಸವಿಲ್ಲದವರಾದಕಾರಣ ಸ್ತ್ರೀವಿದ್ಯಾಭ್ಯಾಸದಿಂದ ಗಣ
ನಾತೀತಗಳಾದ ಲಾಭಗಳುಂಟೆಂದು ಹೊಗಳಿ ರುಕ್ಮಿಣಿಗೆ ವಿದ್ಯೆಕಲಿಸು
ತಿರುವುದಕ್ಕಾಗಿ ರಾಜಶೇಖರನನ್ನು ಶ್ಲಾಘಿಸಿದರು.

ಗಿಳಿಯು ಪಂಜರವಿರುವ ತಾವಿನಿಂದ ನಾಲ್ಕು ಮಾರಿನ ದೂರ
ದಲ್ಲಿ ಪಶ್ಚಿಮದ ಮನೆಯು ಬಾಗಿಲಿರುವುದು. ಈಮನೆ ವಿಶಾಲವಾಗಿ
ಐವತ್ತು ಮಂದಿ ಬ್ರಾಹ್ಮಣರು ಭೋಜನಮಾಡುವುದಕ್ಕೆ ಸಾಕಾಗಿರು
ವುದು. ಇನ್ನು ಕೊಂಚ ಹೊತ್ತಿಗೆ ಊಟಕ್ಕೇಳುವರೆನ್ನುವಾಗ
ಹೋಗಿ ನೋಡಿದರೆ ಬಂದೊಂದು ಮೊಳದ ದೂರಕ್ಕೆ ಎರಡು ಗೋಡೆ
ಗಳುದ್ದಕ್ಕೂ ಸಾಲಾಗಿ ಮಣೆಗಳು ಹಾಕಲ್ಪಟ್ಟು ಅವುಗಳ ಮುಂದೆ
ಹಿಟ್ಟಿನಿಂದ ರಂಗವಲಿಯಿಡಲ್ಪಟ್ಟಿರುವುದು. ಪಶ್ಚಿಮದಮನೆಯ ಈಶಾ
ನ್ಯದ ಮೂಲೆಯಲ್ಲಿ ಗಾರೆಯಿಂದ ಕಟ್ಟಲ್ಪಟ್ಟ ದೇವರ ಜಗಲಿಯಿರು
ವುದು. ಆಜಗಲಿಯ ಮೇಲೆ "ಭುವನೇಶ್ವರಿ" ಎಂಬ ದೇವತಾ
ರ್ಚನಾಸಾಮಗ್ರಿಗಳನ್ನೂ ಸಾಲಗ್ರಾಮಾದಿಗಳನ್ನೂ ಇಡುವ ಪೆಟ್ಟಿಗೆ
ಯಿರುವುದು. ರಾಜಶೇಖರನು ಪ್ರತಿನಿತ್ಯವೂ ಮಡಿಯಲ್ಲಿ ಪಾರಾಯ
ಣಮಾಡುವ ಶ್ರೀಮದ್ರಾಮಾಯಣವು ಅದರ ಮೇಲೆ ಇಡಲ್ಪಟ್ಟಿರು
ವುದು. ರಾಜಶೇಖರನು ಸ್ನಾನಮಾಡಿ ಬಂದು ದೇವರಜಗಲಿಯ
ಮುಂದೆ ಮಣೆಹಾಕಿಕೊಂಡು ಕುಳಿತು ರಾಮಾಯಣಪಾರಾಯಣ
ವನ್ನೂ ಪಂಚಪೂಜೆಯನ್ನೂ ಮಾಡುವನು. ದೇವರ ಜಗಲಿಗಿದಿರಾಗಿ
ರುವ ಬಾಗಿಲನ್ನು ತೆರೆದರೆ ಅಲ್ಲೊಂದು ಹಿತ್ತಿಲಿರುವುದು. ಅಲ್ಲಿ ಗಾರೆ
ಯಿಂದಲೂ ಇಟ್ಟಿಗೆಗಳಿಂದಲೂ ಕಟ್ಟಿದ ಬೃಂದಾವನವೊಂದು ನಾಲ್ಕೈ
ದಡಿಯೆತ್ತರದಮೇಲಂದವಾಗಿರುವುದು. ಅದರಲ್ಲಿ ಶ್ರೀತುಲಸಿ ಕೃಷ್ಣ
ತುಲಸಿ ಸಹ ಶ್ರದ್ಧಾಭಕ್ತಿಗಳಿಂದ ಬೆಳಸಲ್ಪಡುತ್ತಿರುವುವು. ಆಸಮಿಾ

ಪದಲ್ಲೇ ಕೊಂಚದೂರದಲ್ಲಿ ತುಳಸೀವನವೂ ಅಲ್ಲಿಂದಾಚೆ ನಿತ್ಯಮಲ್ಲಿ
ಗೆಯ ಗಿಡವೂ ಅದರ ಸಮೀಪದಲ್ಲಿರುವ ನಂದಿವರ್ಧನದಗಿಡದ ಮೇಲೆ
ಹಬ್ಬಿಕೊಂಡಿರುವ ಕಾಶೀರತ್ನಗಳೂ ಪ್ರತಿನಿತ್ಯವೂ ರಾಜಶೇಖರನ
ದೇವತಾರ್ಚನೆಗೆ ಪುಷ್ಪಪತ್ರಾದಿಗಳನ್ನೊದಗಿಸುತ್ತಿರುವುವು. ಅಲ್ಲಿಂದ
5 ಮೇಲ್ಗಡೆ ರುಕ್ಮಿಣಿಯೂ ಅವಳ ತಂಗಿಯೂ ವಿಶ್ವಾಸದಿಂದ ಬೆಳೆಸುತ್ತಿದ್ದ
ಚೆಂಡುಹೂವಿನ ಗಿಡಗಳೂ, ಪಾರಿಜಾತದ ಗಿಡವೂ, ಚಂದ್ರಕಾಂತಿಯ
ಗಿಡಗಳೂ ಗೋಡೆಯುದ್ದಕ್ಕೂ ವರಿಸೆಯಾಗಿರುವುವು. ಪಶ್ಚಿಮದ
ಮನೆಯ ಪಕ್ಕದಲ್ಲಿ ದಕ್ಷಿಣದಕಡೆ ಇರುವ ಅಡಿಗೆ ಮನೆಯ ಹಿತ್ತಿಲಲ್ಲಿ
ಸಣ್ಣಸಣ್ಣಗೆ ಹೊರಟಿರುವ ಕಂದುಗಳೊಂದಿಗೆ ಸುಂದರವಾಗಿರುವ
10 ಬಾಳೆಯ ಕಂಬಗಳಿರುವುವು. ರಾಜಶೇಖರನು ಪ್ರತ್ಯಹವೂ ಅ
ಲ್ಲಿಯೇ ಸ್ನಾನಮಾಡುವನು.

ಹಿಂದೆ ಹೇಳಿದ ಮೇರೆ ರುಕ್ಮಿಣಿ ಸ್ನಾನ ಮಾಡಿ ಬಂದು, ಗೋ
ದಾವರಿಯಿಂದ ಚೆಂಬಿನಲ್ಲಿ ತಂದ ನೀರನ್ನು ಬೃಂದಾವನದಲ್ಲಿ ಹಾಕಿ ಕೈ
ಮುಗಿದು, ಒದ್ದೆಯ ಬಟ್ಟೆಯಿಂದಲೇ ಸುತ್ತೂ ಮೂರು ಪ್ರದಕ್ಷಿಣೆ
15 ಮಾಡಿ, ಒಳಕ್ಕೆ ಹೋಗಿ ಒದ್ದೆಯ ಬಟ್ಟೆಯನ್ನು ಬಿಟ್ಟು ಪಟ್ಟೆ
ಯ ಸೀರೆಯನ್ನುಟ್ಟುಕೊಂಡು, ಒಂದು ಕೈಯಲ್ಲಿ ಕುಂಕುಮದ
ಬರಣಿಯನ್ನೂ ಮತ್ತೊಂದು ಕೈಯಲ್ಲಿ ಅಕ್ಷತೆ, ಅರಿಸಿನ, ಅಕ್ಕಿಯ
ಹಿಟ್ಟು ಉಳ್ಳ ಪಂಚಪಾಳೆಯನ್ನೂ ತೆಗೆದುಕೊಂಡು ಬಂದು,
ಬೃಂದಾವನದ ಮುಂದಣ ಜಗಲಿಯ ಮೇಲೆ ನೀರುಚೆಲ್ಲಿ ಕೈಯಿಂದ
20 ಸಾರಿಸಿ ಅಕ್ಕಿಯ ಹಿಟ್ಟನಿಂದ ಪದ್ಮಗಳು ಮುಂತಾಗಿ ವಿಚಿತ್ರವಾದ
ರಂಗವಲಿಯನ್ನಿಡುತ್ತ ನಡುನಡುವೆ ಚಿತ್ರವಾಗಿ ಕುಂಕುಮದಿಂದಲೂ
ಅರಿಸಿನದಿಂದಲೂ ಅಲಂಕರಿಸುತ್ತಾ ಕುಳಿತುಕೊಂಡು, ಮಧುರಸ್ವರ
ದಿಂದ ಮೆಲ್ಲಗೆ "ಲಂಕಾಯೋಗ"ವನ್ನು ಹೇಳಿಕೊಳ್ಳುತ್ತಿದ್ದಳು.

ಅಷ್ಟರಲ್ಲಿ ರಾಜಶೇಖರನು ಸಂಗಡ ಇದ್ದವರೊಂದಿಗೆ ನಾನಾ
25 ವಿಷಯಗಳನ್ನು ಮಾತಾಡುತ್ತ ನಡುನಡುವೆ ಅವರ ಕೆರಗಳ ಕಿರ್ರೆಂಬ
ಶಬ್ದದಲ್ಲಡಗಿಹೋದ ಮಾತುಗಳನ್ನು ಮರಳಿ ಕೇಳುತ್ತ ಅನೇಕರಸಂ
ಗಡ ಕೂಡಿ ಮನೆಗೆ ಬಂದು, ಪಾದರಕ್ಷೆಗಳನ್ನು ನಡವೆಯಲ್ಲಿ ಬಿಟ್ಟು

ಒಬ್ಬೊಬ್ಬರಾಗಿ ಬಂದು ದಿವಾನ್‌ಖಾನೆಯಲ್ಲಿ ರತ್ನಕಂಬಳಿಗಳ ಮೇಲೆ
ಕುಳಿತುಕೊಂಡಾಗ, ತಾನೂ ದಕ್ಷಿಣದ ಗೋಡೆಗೊರಗಿಕೊಂಡು ಬಿಸಿ
ಲಲ್ಲಿ ನಡೆದು ಬಂದ ಬಳಲಿಕೆಯಿಂದ ಹಿಡಿದ ಬೆವರಾರುವಂತೆ ಉತ್ತರೀ
ಯದಿಂದ ಬೀಸಿಕೊಳ್ಳುತ್ತ ಕುಳಿತುಕೊಂಡನು. ಆಗ ನಂಬಿರಾಘ
ವಾಚಾರಿಯು ಪೆಳ್ಳೆಯೇಳುತ್ತಿರುವ ನಾಮಗಳ ತಿರುಮಣಿಯನ್ನೆಡ 5
ಗೈಯಿಂದೊತ್ತಿಕೊಂಡು ಕೈಗಳನ್ನು ನುಲಿದುಕೊಳ್ಳುತ್ತ ರಾಜಶೇಖ
ರನ ಮುಖದ ಮೇಲೆ ದೃಷ್ಟಿಯನ್ನಿಟ್ಟು "ದೇವರಿಗೀಚೆಗೆ ಸ್ವಾಮಿಯ
ಮೇಲನುಗ್ರಹ ಕೊಂಚ ಕಡಮೆಯಾಗಿದೆ" ಎಂದೊಂದು ಮುಗು
ಳ್ನಗೆನಕ್ಕು ಎದ್ದು ನಿಂತುಕೊಂಡು ಬಟ್ಟೆಯಲ್ಲಿದ್ದ ಕಣಿಗಲು ಹೂವಿನ
ತೋಮಾಲೆಯನ್ನು ತೆಗೆದು ಕೈಯಲ್ಲಿ ಹಿಡಿದುಕೊಂಡು ವಿನಯತೋ 10
ರ್ಪಡಿಸುತ್ತ "ಸ್ವಾಮಿಯಲ್ಲಿ ಪರಿಪೂರ್ಣಕಟಾಕ್ಷವನ್ನಿಡಬೇಕು"
ಎನ್ನುತ್ತ ಮೆಲ್ಲಗೆ ರಾಜಶೇಖರನ ಕೈಗೆ ಕೊಟ್ಟನು.

ರಾಜಶೇಖರನು ಭಕ್ತಿಯಿಂದ ತೆಗೆದುಕೊಂಡು "ಈನಡುವೆ
ನಮ್ಮ ಜನಾರ್ದನಸ್ವಾಮಿಯವರಿಗೆ ನಡೆಯಬೇಕಾದುತ್ಸವಗಳಾವುವಾ
ದರೂ ಇವೆಯೇ?" ಎಂದು ಕೇಳಿದನು. 15

ರಾಘವಾಚಾ—"ಇನ್ನು ಹದಿನೈದುದಿನಗಳಿಗೆ ಮಾರ್ಗಶಿರಶುದ್ಧ
ಚತುರ್ದಶೀದಿನವೂ ಹುಣ್ಣಿಮೆಯದಿನವೂ ವರಿಸೆಯಾಗಿ ತಿರುಮಂಗ
ಯಾಳ್ವಾರರ ಮತ್ತು ತಿರುಪ್ಪಾಣಾಳ್ವಾರರ ತಿರುನಕ್ಷತ್ರಗಳು ಬರು
ವುವು. ಆಗ ವಿಶೇಷೋತ್ಸವಗಳು ನಡೆಯಬೇಕಾಗಿವೆ. ಇನ್ನು
ತಿಂಗಳಿಗೆ ಧನುರ್ಮಾಸ ಬರುವುದು. ಆತಿಂಗಳ ಪ್ರತಿದಿನವೂ ಸ್ವಾ 20
ಮಿಗೆ ನಿತ್ಯೋತ್ಸವಗಳೂ ಸಂಕ್ರಾಂತಿದಿನಗಳಲ್ಲಿ ಅಧ್ಯಯನೋತ್ಸ
ವವೂ ನಡೆಯಬೇಕಾಗಿವೆ. ಧನುರ್ಮಾಸದಲ್ಲೇ ಪುಷ್ಯಬಹುಳದ್ವಾದ
ಶೀದಿನ ತೊಂಡರಡಿಪ್ಪೊಡಿಯಾಳ್ವಾರರ ತಿರುನಕ್ಷತ್ರ ಬರುವುದು. ಆ
ದಿವಸ ಸ್ವಾಮಿಯುತ್ಸವಕ್ಕಿಂತಲೂ ವಿಶೇಷವಾಗಿ ನಡೆಯಬೇಕಾಗಿದೆ."

ರಾಜಶೇಖರ—"ನಿತ್ಯವೂ ಸ್ವಾಮಿಗೆ ಬಾಲಭೋಗವೂ ನಂದಾ 25
ದೀಪವೂ ಕ್ರಮವಾಗಿ ನಡೆಯುತ್ತಿವೆಯೆ?"

ರಾಘವಾಚಾರಿ—"ತಾವು ಪ್ರತಿಮಾಸವೂ ದಯೆಮಾಡಿ ಕೊಡಿಸುವೆರಡುರೂಪಾಯಿಗಳು ಬಾಲಭೋಗಕ್ಕೆ ಸಾಲದೆ ಇವೆ. ಈಗ ಸ್ವಾಮಿಗಳು ಅಧಿಕವಾಗಿ ಬರುತಿದಾರೆ. ತಾವು ದಯೆಮಾಡಿ ಕೊಡಿಸುವ ಎರಡು ರೂಪಾಯಿಗಳ ಜತೆಗೆ ಮತ್ತೊಂದು ರೂಪಾಯನ್ನು ಸೇರಿಸಿ ನಂದಾದೀಪವನ್ನೊಂದುರೀತಿಯಾಗಿ ನಡೆಯಿಸಿಕೊಂಡು ಬರುತಿದೇನೆ. ಆದರೆ ನಂದಾದೀಪದ ಫಲದಲ್ಲಿ ಮತ್ತೊಬ್ಬರಿಗೆ ಭಾಗವಿರುವುದು ನನಗಿಷ್ಟವಿಲ್ಲ. ಸ್ವಾಮಿಗೆ ಯಾವ ವಾಹನಗಳೂ ಇಲ್ಲ. ಜಲಕ್ರೀಡೆಯ ವಾಹನವೊಂದಿದ್ದರೆ ನಾಳೆ ಬರುವ ಅಧ್ಯಯನೋತ್ಸವದಲ್ಲಿ ಎಷ್ಟೋ ಚೆನ್ನಾಗಿರುವುದು. ಅದು ಈಸಾರಿ ಆಗದೆ ಇದ್ದರೂ ಮುಂದೆಯಾದರೂ ನಿಮಗೆ ಹೆಸರುಬರಬೇಕು. ಮೊದಲೇ ಕಿವಿಯಲ್ಲಿ ಹಾಕಿದ್ದರೆ ಯಾವುದಕ್ಕೂ ಒಳ್ಳೆಯದೆಂದು ನಿಮ್ಮಲ್ಲಿ ಅರಿಕೆಮಾಡಿಕೊಂಡಿದೇನೆ."

ರಾಜಶೇಖರ—"ಮೊನ್ನೆ ದೇವಾಲಯದಲ್ಲಿ ಸ್ವಾಮಿಸ್ವಾಮಿಗಳೇ ಹೋರಾಡಿದರಂತೆ."

ರಾಘವಾಚಾರಿ—"ದ್ವಾರಕಾತಿರುಮಲೆಯಿಂದ ಬಂದ ಸ್ವಾಮಿ ಸಾಪಾಟುಮಾಡಿ ಕುಳಿತಿರುವಾಗ, ಪೆಂಟಪಾಡಿನಿಂದ ಬಿಜಯಮಾಡಿದ ಸ್ವಾಮಿ ಪೆರುಮಾಳರ ಸೇವೆಮಾಡಿ ಕುಳಿತುಕೊಂಡರು. ಅವರಿಬ್ಬರಲ್ಲೊಬ್ಬರು ತೆಂಗಲೆಯವರು, ಮತ್ತೊಬ್ಬರು ವಡಹಲೆಯುವರು, ಅದುದರಿಂದ ನಾಮದಕಳಗೆ ಪೀಠ(ಪಾದ)ವನ್ನಿಡಬಹುದು ಕೂಡದು ಎಂಬ ವಾಗ್ವಾದವನ್ನು ಮಾಡತೊಡಗಿದರು."

ರಾಜಶೇಖರ—"ಸುಮ್ಮನೆ ಮಾತುಗಳಲ್ಲೇ ಸರಿಹೋಯಿತೇ?"

ರಾಘವಾಚಾರಿ—"ತರುವಾಯ ಕೊಂಚ ಕೈ ಕೈ ಕಲೆತರೂ ಹೊಡೆದಾಡದಂತೆ ನಾನೂ ನನ್ನ ತಮ್ಮನೂ ಅಡ್ಡವಾಗಿ ಹೋಗಿ ನಿವಾರಿಸಿದೆವು."

ರಾಜಶೇಖರ—"ನಮ್ಮ ಜನಾರ್ದನಸ್ವಾಮಿಗೆಷ್ಟರ ಮಾನ್ಯವಿದೆ?"

ರಾಘವಾಚಾರಿ—"ಏಳುಖಂಡುಗದ ಮಾನ್ಯವಿದೆಯೆಂದು ಹೇಳುವರು; ಆದರೆ ಐದುಖಂಡುಗಮಾತ್ರ ಸೂಳೆಯರನುಭವದಲ್ಲಿದೆ; ಮಿಕ್ಕೆರಡು ಖಂಡುಗವೂ ಅರ್ಚಕರದೇ ವಿನಾ ಸ್ವಾಮಿಯದಲ್ಲ."

ರಾಜಶೇಖರ—"ಮೊನ್ನೆ ನಡೆದ ಸ್ವಾಮಿಯುತ್ಸವದಲ್ಲಿ ಸೊಳೆಯರ ಮೇಳ ಬರಲಿಲ್ಲವಲ್ಲ."

ರಾಘವಾಚಾರಿ—"ಅವರು ಎಲ್ಲಾ ಉತ್ಸವಗಳಿಗೂ ಬಾರರು. ರಾಜಮಹೇಂದ್ರದಲ್ಲೊಕ್ಕಲಿರುವರಾದುದರಿಂದ ಚಿಲ್ಲರೆಹಬ್ಬಗಳಿಗೆಲ್ಲ ಬಂಡಿಮಾಡಿಕೊಂಡು ಬರುವುದು ಬಹುಪ್ರಯಾಸ. ಸ್ವಾಮಿಯ ಜಾತ್ರೆಯಲ್ಲಿ ರಥೋತ್ಸವದ ದಿವಸಮಾತ್ರ ಬರುವರು. ಆಗ ಅವರ ಬತ್ತಕ್ಕಾಗಿ ದೇವರ ಹಣದಲ್ಲಿ ನಾಲ್ಕುರೂಪಾಯಿಗಳನ್ನು ಕೊಡುವುದು ಪದ್ಧತಿ."

ಅಷ್ಟರೊಳಗೆ ಯಾವನೋ ಒಬ್ಬ ಮೂವತ್ತು ವರುಷಗಳ ವಯಸ್ಸುಳ್ಳ ಶ್ಯಾಮಲವರ್ಣದ ಗೃಹಸ್ಥನು ಬಿಳಿಯಬಟ್ಟೆಗಳನ್ನುಟ್ಟು ಕೊಂಡು ಬಲಗೈಯಲ್ಲಿದ್ದ ಕೋಲನ್ನಾಡಿಸುತ್ತ, ಮುಂದುಗಡೆಯೊಬ್ಬ ಕೂಲಿಯಾಳು ಬಟ್ಟೆಗಳ ಮೂಟೆಯನ್ನು ನೆತ್ತಿಯಮೇಲಿಟ್ಟುಕೊಂಡು ನಡೆದು ಬರಲು, ನಡವೆಯಿಂದ ಹಜಾರಕ್ಕೆ ಬಂದು ಅಲ್ಲಿ ನಿಂತು ಕೊಂಡು, "ಎಲೋ! ರಾಮಿಗಾ! ಗಂಟನೊಳಕ್ಕೆ ತೆಗೆದುಕೊಂಡು ಹೋಗಿ ಯಾರನ್ನಾದರೂ ಕರೆದು ರಾಜಶೇಖರನು ಮಲಗುವ ಮನೆಯಲ್ಲಿಟ್ಟು ಬಾ" ಎಂದು ಕೂಲಿಯವನಿಗೆ ಹೇಳಿ ಕುಳಿತಿರುವರನ್ನೆಲ್ಲ ಎಡವುತ್ತ ಬಂದು ಮೊದಲೆಷ್ಟೋಪರಿಚಯವಿದ್ದವನಂತೆಯೇ ತಾನು ರಾಜಶೇಖರನ ಮುಂದೆ ತಿವಾಸಿಯ ಮೇಲೆ ಕುಳಿತುಕೊಂಡನು. ಇದುವರೆಗೂ ರಾಜಶೇಖರನು ಆತನ ಮುಖವನ್ನೇ ಕಾಣದಿದ್ದರೂ ದೊಡ್ಡಮನುಷ್ಯ ಮನೆಗೆ ಬಂದಾಗ ಮರ್ಯಾದೆಮಾಡದಿದ್ದರೆ ಸರಿಯಲ್ಲವೆಂದು, ಕೊಂಚ ಮೇಲಕ್ಕೆದ್ದು 'ದಯೆಮಾಡಿ' ಎಂದು ಕೈತೋರಿಸಿ, ತಾನು ಸ್ವಲ್ಪ ಹಿಂದಕ್ಕೆ ಜರಗಿ ಸ್ಥಳವನ್ನು ಕೊಟ್ಟು 'ಮನೆಯ ಕಡೆಯೆಲ್ಲರೂ ಕ್ಷೇಮವೇ?' ಎಂದು ಕುಶಲಪ್ರಶ್ನೆಮಾಡಿ 'ನೀವಾರು' ಎಂದು ಕೇಳಿದರೆ ತಪ್ಪುಹಿಡಿಯುವರೇನೋ ಎಂಬ ಸಂಶಯದಿಂದ ಸುಮ್ಮನಿದ್ದನು. ಆಗ ಬಂದಾತನು ತನ್ನ ನಸ್ಯದ ಬರುಡೆಯನ್ನು ರಾಘವಾಚಾರ್ಯನಕಡೆ ಉರುಳಿಸಿ ಆತನ ಬುರುಡೆಯನ್ನು ತೆಗೆದು ಕೊಂಡು, ಮೊದಲು ತನ್ನ ಕೈಯಲ್ಲಿದ್ದ ಪುಡಿಯನ್ನು ಬೀಸಾಡಿ ಹೊಸ

ಪಟ್ಟುಹಿಡಿದು ಅರ್ಥವನ್ನು ಹೀರಿ ರಾಜಶೇಖರನಕಡೆ ತಿರುಗಿ 'ರಾಜಶೇಖರರೇ! ನನ್ನನ್ನು ಮರೆತುಹೋದಂತಿದ್ದೀರಿ!' ಎಂದನು.

ರಾಜಶೇಖರ—'ಇಲ್ಲ ಇಲ್ಲ' ಎಂದು ಮುಖದಕಡೆ ಚೆನ್ನಾಗಿ ನೋಡಿದನು.

5 ಹೊಸಬ—"ಇನ್ನೂ ನನ್ನ ಗುರುತು ಹಿಡಿಯಲಿಲ್ಲ! ನೀವು ನನ್ನನ್ನು ಹತ್ತುವರುಷಗಳಕೆಳಗೆ ರಾಜಮಹೇಂದ್ರವರದಲ್ಲಿ ಶ್ರೀರಾಮಮೂರ್ತಿಯವರ ಮನೆಯಲ್ಲಿ ನೋಡಿದ್ದೀರಿ. ನಾನು ವಾಮರಾಜು—ಭೈರವಮೂರ್ತಿ. ನಾವುಗಳೆಲ್ಲರೂ ಸಮೀಪಬಂಧುಗಳು. ನಿಮ್ಮ ತಾಯಿಯು ಸೋದರತ್ತೆಯ ಅಳಿಯ ನಮ್ಮ ಸೋದರಮಾವಂ-
10 ದಿರಿಗೆ ಸಾಕ್ಷಾತ್ತಾಗಿ ಬಂದುಬಿಟ್ಟ ಸೋದರತ್ತೆಯಮಗ. ಮೊನ್ನೆ ನಮ್ಮಣ್ಣ ಸಾಂಬಯ್ಯನವರು ನಿಮ್ಮ ಮನೆಯಲ್ಲಿ ಬಂದುತಿಂಗಳಿದ್ದು ಬಂದ ತರುವಾಯ ನೀವು ಮಾಡಿದ ಆದರಣೆಯನ್ನು ನಿತ್ಯವೂ ಹೇಳುತ್ತಲೇ ಇರುವರು. ಇಲ್ಲಿಂದ ಹೊರಡುವಾಗ ನೀವು ಕೊಟ್ಟ ಉಡುಗರೆಗಳನ್ನು ಸಹಿತ ಪೆಟ್ಟಿಗೆತೆರೆದು ತೋರಿಸಿದರು. ಅದನ್ನು
15 ನೋಡಿ ನಮ್ಮ ನಂಟರಲ್ಲಿ ನೀವೊಬ್ಬರು ಇಷ್ಟು ಅನುಕೂಲಸ್ಥಿತಿಯಲ್ಲಿದ್ದೀರೆಂದು ಪರಮಾನಂದಭರಿತನಾದೆನು."

ಆಮಾತುಗಳನ್ನು ಕೇಳಿ ಒಳಗಿನ ಕೊಠಡಿಯಲ್ಲಿ ಮಲಗಿದ್ದ ಮುದುಕನೊಬ್ಬನು ಕೆಮ್ಮುತ್ತ ಎದ್ದು ಬಂದು 'ಎಲಾ ಭೈರವಮೂರ್ತಿ! ನೀನು ಯಾವಾಗಬಂದೆ?' ಎಂದು ಕೇಳಿದನು.

20 ಭೈರವಮೂರ್ತಿ—"ಓಹೊ! ಪ್ರಸಾದರಾವು ತಾತನವರೇ? ನೀವು ದಯಮಾಡಿಸಿ ಎಷ್ಟುದಿನಗಳಾದುವು?"

ಪ್ರಸಾದರಾವು—"ಎರಡು ತಿಂಗಳಿಂದ ಇಲ್ಲಿಯೇ ಇದೇನೆ. ನಂಟನೆಂದು ರಾಜಶೇಖರನನ್ನು ನೋಡಿ ಹೋಗೋಣವೆಂದು ಬಂದು ಈತನ ಬಲವಂತಕ್ಕೆ ಪ್ರತಿ ಹೇಳಲಾರದೆ ಇಲ್ಲಿ ಸಿಕ್ಕಿ ಬಿದ್ದಿದ್ದೇನೆ. ನಮ್ಮ
25 ಬಂಧುಗಳಲ್ಲಿ ರಾಜಶೇಖರನು ಬಹುಯೋಗ್ಯನಯ್ಯಾ!" ಎಂದು ಹೇಳಿ ಕುಳಿತುಕೊಂಡನು.

ವಾಚಾರಿ—“ ತಾತನವರೇ! ನಿವಂಗೂ ರಾಜಶೇಖರನಿಗೂ ಎಂಥಾ ಬಾಂಧವ್ಯ ? ”

ಪ್ರಸಾದರಾವು —“ ನಮ್ಮವನ ಬಂಧುತ್ವವನ್ನು ಈಗ ಕೇಳಿದಿರಷ್ಟೆ? ಇವನ ಸೋದರಮಾವನ ಭಾವಮೈದ ನನ್ನ ಮಗಳ ಅತ್ತೆಯ ಸವತಿಯ ತಮ್ಮ. ”

ಈಪ್ರಕಾರವಾಗಿ ಸಂಭಾಷಣೆ ನಡೆಯುತಿರುವಾಗ ಒಳಗಿನಿಂದ ಸ್ತ್ರೀಕಂಠದಲ್ಲಿ ‘ ಸೀತಾ! ಸೀತಾ ! ’ ಎಂದು ಎರಡುಮೂರು ಸಾರಿ ಕರೆದಂತೆ ಕೇಳಬಂತು. ಅದನ್ನು ಕೇಳಿ ರಾಘವಾಚಾರಿ ‘ ಅಮ್ಮಾಯಿ! ಸೀತಮ್ಮಾ ! ’ ಎಂದು ಕೂಗಿ ‘ ಒಳಗೆ ಅಮ್ಮನವರು ಏತಕ್ಕೋ ಕರೆಯುತ್ತಾರೆ ’ ಎಂದು ಹೇಳಿದನು. ಆಗ ಬಾವಿಯಕಡೆ ಇದ್ದ ಕೈಸಾಲೆಯಲ್ಲಿ ತನ್ನ ಕೆಳದಿಯರೊಂದಿಗೆ ಕವಡೆಗಳ ನ್ನಾಡುತಿದ್ದ ಏಳುಸಂವತ್ಸರಗಳ ವಯಸ್ಸಿನ ಶ್ಯಾಮಲವರ್ಣದ ಹುಡುಗಿ ಪಾವಡವನ್ನುಟ್ಟುಕೊಂಡು ಬಲಗೈಯಲ್ಲಿ ಕವಡೆಗಳನ್ನೂ ಎಡಗೈಯಲ್ಲಿ ಸುದ್ದೆಮಣ್ಣಿನ ಪಾಚಿಕೆಗಳನ್ನೂ ಹಿಡಿದುಕೊಂಡು ‘ ಬಂದೆ, ಬಂದೆ ’ ಎಂದು ಕೂಗುತ್ತ ಕಾಲಿನ ಗೆಜ್ಜೆಗಳು ಘಲ್‌ಘಲ್ ಎನ್ನುವಂತೆ ಪಜಾರದಿಂದ ಪಶ್ಚಿಮದಮನೆಯ ಬಾಗಿಲಕಡೆಗೆ ಓಡಿಬಂದಳು. ಆಹುಡುಗಿ ರಾಜಶೇಖರನ ಕಿರಿಯಮಗಳು. ಹಾಗೆಬಂದು ಬಾಗಿಲಿಗೀಕಡೆಯೇ ನಿಂತುಕೊಂಡು ಸೀತೆ ‘ ಅಮ್ಮಾ ! ಯಾತಕ್ಕೆ ಕರೆದೆ ? ’ ಎಂದು ಕೇಳಿದಳು.

ಮಾಣಿಕ್ಯಾಂಬೆ—“ ಅಡಿಗೆಯಾಗಿದೆ, ಸ್ನಾನಕ್ಕೇಳಬಹುದೆಂದು ಯಜಮಾನರಿಗೆ ಹೇಳು. ”

ಮಾಣಿಕ್ಯಾಂಬೆ ರಾಜಶೇಖರನ ಭಾರ್ಯೆ. ಆಕೆ ರುಕ್ಮಿಣಿಗೆ ಸಮಾನವಾಗಿ ತಿಳಿವುಳ್ಳವಳೂ ವಿದ್ಯೆಕಲಿತವಳೂ ಆಗದಿದ್ದರೂ, ಗೃಹಕೃತ್ಯವನ್ನು ಸರಿಯಾಗಿ ನಡೆಯಿಸುವುದರಲ್ಲೂ ಪಾಕಮಾಡುವುದರಲ್ಲೂ ನಿರುಪಮಾನವಾದ ಪ್ರಜ್ಞೆಯುಳ್ಳವಳು ; ರೂಪದಲ್ಲಿ ಬಹುಮಟ್ಟಿಗೆ ದೊಡ್ಡಮಗಳನ್ನು ಹೋಲಿರುವಳಾದರೂ ಮುಖವು ಕೊಂಚ ಮುದಿ

ಯಾಗಿಯೂ ದೇಹಚ್ಛಾಯೆ ಬಂದು ಬಣ್ಣ ಕಪ್ಪಾಗಿಯು [illegible]ಣುಬ ರುವುವು. ಆಕೆ ಮೂವತ್ತುನಾಲ್ಕುವರುಷಗಳ ವಯಸ್ಸಿನವಳಾಗಿದ್ದರೂ ದೂರದಿಂದ ನೋಡಿದರೆ ಚಿಕ್ಕವಳಾಗಿಯೇ ಕಾಣಬರುವಳು.

ಅಷ್ಟರೊಳಗೆ ಸೀತೆ ಮರಳಿ ಹಜಾರಕ್ಕೆ ಓಡಿಬಂದು 'ಅಪ್ಪಾ! ಅಡಿಗೆಯಾಗಿದೆಯಂತೆ; ಅಮ್ಮ ಸ್ನಾನಕ್ಕೇಳಬಹುದೆಂದು ಹೇಳುತ್ತಾಳೆ' ಎಂದು ಹೇಳಿ ಮೊದಲಿನಂತೆ ಕವಡೆಯಾಡುವುದಕ್ಕೆ ಬಾವಿಯ ಕಡೆಯ ಕೈಸಾಲೆಗೆ ಹೋದಳು.

ರಾಜಶೇಖರ—"ಪ್ರಸಾದರಾಯರೇ! ನೀವು ಸ್ನಾನಮಾಡುವಿರೇನೋ! ಬಾವಿಯಬಳಿಗೆ ಹೋಗಿ. ಭೈರವಮೂರ್ತಿಯವರೇ! ಗೋದಾವರಿಗೆ ಹೋಗುವಿರೋ! ಇಲ್ಲದೆ ಬಾವಿಯ ಹತ್ತಿರವೇ ಸ್ನಾನಮಾಡುವಿರೋ?"

ಭೈರವಮೂರ್ತಿ—"ಕಾರ್ತಿಕ ಸೋಮವಾರವಾದುದರಿಂದ ಗೋದಾವರಿಗೇ ಹೋಗುವೆನು."

ಆಗಲ್ಲಿದ್ದವರೆಲ್ಲರೂ ಎದ್ದು, ರಾಜಶೇಖರನಪ್ಪಣೆತೆಗೆದುಕೊಂಡು ಅವರವರ ಮನೆಗೆ ಹೊರಟರು. ರಾಜಶೇಖರನು ಪಶ್ಚಿಮದ ಮನೆಯೊಳಕ್ಕೆ ಹೋದನು. ಒಳಗೆ ಸಾಣೆಯಕಲ್ಲಿನಮೇಲೆ ಗಂಧ ತೇಯುತ್ತಿದ್ದ ಮಾಣಿಕ್ಯಾಂಬೆ ಎದ್ದು, ಕಾಲುಂಗುರಗಳ ಶಬ್ದವಾಗೆ, ಪಶ್ಚಿಮದಮನೆಯ ಹಿತ್ತಿಲುಬಾಗಿಲಿಗೆ ಬಂದು ಬಂದುಕಾಲನ್ನು ಹೊಸಿಲಿಗೀಕಡೆಯಲ್ಲೂ ಇನ್ನೊಂದುಕಾಲನ್ನು ಕೈಸಾಲೆಯಲ್ಲೂ ಇಟ್ಟು ಬಲಗೈಯಲ್ಲಿ ದ್ವಾರಬಂಧವನ್ನು ಹಿಡಿದು ನಿಂತುಕೊಂಡು 'ರುಕ್ಮಿಣೀ! ನಿಮ್ಮಯ್ಯನವರು ಸ್ನಾನಕ್ಕೆ ಬಂದಿದಾರೆ; ಬೇಗ ಬಂದು ನೀರು ತುಂಬಿಕೊಡು' ಎಂದು ಕೂಗಿದಳು. ಅದನ್ನು ಕೇಳಿ ದೇವತಾರ್ಚನೆಗೆ ಹೂಗೊಯ್ಯುತಿದ್ದ ರುಕ್ಮಿಣಿ 'ಬರುತ್ತೇನೆ' ಎಂದು ಹೇಳಿ ಬೇಗಬೇಗ ತಾಮ್ರದತಟ್ಟೆಯಲ್ಲಿ ನಿತ್ಯ ಮಲ್ಲಿಗೆಹೂಗಳನ್ನೂ ತುಳಸೀದಳಗಳನ್ನೂ ತಂದು ದೇವರ ಜಗಲಿಯಮೇಲಿಟ್ಟು, ತಂದೆಯವರಿಗೆ ನೀರನ್ನು ತುಂಬಿ ಕೊಡುವುದಕ್ಕೆ ಅಡಿಗೆಮನೆಯ ಹಿತ್ತಿಲಿಗೆ ಹೋದಳು. ಮಾಣಿಕ್ಯಾಂಬೆ ಕಂಚಿನಬಟ್ಟಲುಗಳಲ್ಲಿ ಗಂಧಾಕ್ಷತೆಗ

ಳನ್ನೂ ಗೂಡಿನಲ್ಲಿದ್ದ ಕೈಪಿಡಿಯನ್ನೂ ವಿಭೂತಿಯ ಪೆಟ್ಟಿಗೆಯನ್ನೂ
ತೆಗೆದುಕೊಂಡು ಬಂದು ದೇವರ ಜಗಲಿಯಹತ್ತಿರಿದ್ದ ಮಣೆಯ ಸಮೀಪ
ದಲ್ಲಿಟ್ಟಳು. ಕೂಡಲೇ ಒಳಗಿನಿಂದ ನಾಲ್ವತ್ತು ವರುಷ ಕಳೆದಿದ್ದ ವಿಧವೆ
ಯೊಬ್ಬಾಕೆ ಹಿಂಡಿದೊದ್ದೆಯಬಟ್ಟೆಯನ್ನುಟ್ಟುಕೊಂಡು ಸೆರಗನ್ನು
ನೆತ್ತಿಯಮೇಲೆ ಬರುವಂತೆ ಮುಸುಕುಹಾಕಿಕೊಂಡು ಬಿಳಿಯ ಬೂದಿ
ಯನ್ನು ಹಣೆಯಲ್ಲಿ ಬೊಟ್ಟಿಟ್ಟುಕೊಂಡು ಬೆಳ್ಳಿಯ ತಂಬಿಗೆಗಳಲ್ಲಿ
ನೀರನ್ನು ತಂದು ಮಣೆಯ ಹತ್ತಿರ ಇಟ್ಟಳು. ತರುವಾಯ ರಾಜಶೇ
ಖರನು ಸ್ನಾನಮಾಡಿ ಜುಟ್ಟೊರಸಿ ಗಂಟುಹಾಕಿಕೊಂಡು ಆದಿನ ಒಣಗ
ಹಾಕಿದ್ದ ಮಡಿಧೋತ್ರವನ್ನುಟ್ಟುಕೊಂಡು, ದೇವರ ಜಗಲಿಯ ಮುಂ
ದಿದ್ದ ಮಣೆಯಮೇಲೆ ಕುಳಿತುಕೊಂಡು ಆಚಮನಮಾಡಿ ವಿಭೂತಿ
ಯನ್ನು ಸ್ವಲ್ಪ ನೀರಲ್ಲಿ ಕಲಸಿ ಅಂಗುಷ್ಠಕನಿಷ್ಠಿಕೆಗಳುವಿನಾ ಮಿಕ್ಕ
ಮೂರು ಬೆರಳಿನಿಂದ ಹಣೆಯಲ್ಲೂ ಭುಜಗಳಮೇಲೂ ಕಂಠದಲ್ಲೂ
ಹೊಟ್ಟೆಯಮೇಲೂ ಎದೆಯಮೇಲೂ ರೇಖೆಗಳನ್ನಿಟ್ಟುಕೊಂಡು,
ಭುವನೇಶ್ವರಿಯ ಬೀಗವನ್ನು ತೆರೆದು ವಿಗ್ರಹಗಳನ್ನೂ ಸಾಲಗ್ರಾಮ
ಗಳನ್ನೂ ತಟ್ಟೆಯಲ್ಲಿಟ್ಟು ಮಂತ್ರಗಳನ್ನು ಹೇಳುತ್ತ ದೇವತಾರ್ಚನೆ
ಗಾರಂಭಿಸಿದನು. ಅದುವರೆಗೆ ಮಿಕ್ಕವರೆಲ್ಲರೂ ಸ್ನಾನಮಾಡಿಬಂದು
ಗೋಡೆಯ ಹತ್ತಿರ ಸಾಲಾಗಿ ಮಣೆಗಳಮೇಲೆ ಕುಳಿತುಕೊಂಡರು.

ಭೋಜನಕ್ಕೆ ಬರಬೇಕಾದವರೆಲ್ಲಾ ಒಳಕ್ಕೆ ಬಂದಮೇಲೆ ಮಾ
ಣಿಕ್ಯಾಂಬೆ ಮಡಿಬಿಟ್ಟು, ನಡುವೆಯ ಕದವನ್ನು ಹಾಕಿ ಬಂದು ಮಲ
ಗುವ ಮನೆಯಲ್ಲಿ ಕುಳಿತುಕೊಂಡು ವೀಳೆಯದೆಲೆಗಳನ್ನು ಸುತ್ತು
ಮಾಡುತ್ತಿದ್ದಳು. ಆಗ ಬೀದಿಯ ಬಾಗಿಲಲ್ಲಿ “ ರಾಜಶೇಖರರೇ ! ”
ಎಂದು ಮೇಲ್ಮೇಲೆ ಕುರುಬರ ಕೂಗಿನಂತೆ ಇಪ್ಪತ್ತು ಸಾರಿ ಕೇಳಬಂತು.
“ ಬಂದೆ, ಬಂದೆ ” ಎಂದೆನ್ನುತ್ತ ಮಾಣಿಕ್ಯಾಂಬೆ ಒಳಗಿನಿಂದ ಬರು
ವುದರೊಳಗಾಗಿ, ಕೂಗುಗಳೊಂದಿಗೆ ಕದದಮೇಲೆ ದಬದಬಾ ಎಂದು
ಗುದ್ದಿದ ಶಬ್ದವು ಕೇಳಬಂತು. ಆಕೆಯೆದ್ದುಬಂದು ಕದವನ್ನು ತೆರೆ
ಯುವಾಗ, ಹಣೆಯಲ್ಲಿ ದಟ್ಟವಾಗಿಟ್ಟಿದ್ದ ವಿಭೂತಿಯು ಬೆವರಿನೊಡನೆ
ಕಲೆತು ಸಪ್ಪೆ ದವಡೆಗಳಿಗೆ ಬಣ್ಣಹಚ್ಚಿದಂತಿರೆ, ಕಿವಿಯಲ್ಲಿನ ಕುಂಡ

ಲಗಳು ತೂಗಾಡುತಿರೆ, ಸುಕ್ಕು ಬಿದ್ದಿದ್ದ ಮುದಿಮುಖವೂ, ಅಂಗವ
ಸ್ತ್ರದೊಡನೆ ಸೇರಿಸಿ ಸುತ್ತಿದ ಬಟ್ಟೆಗಳ ಸಂದಿನಿಂದ ಕಾಣಬರುವ
ಬಿಳಿಯ ಜುಟ್ಟಿನ ತಲೆಯೂ, ನೀರ್ಗಾವಿಧೋತ್ರದ ಮೇಲೆ ಸುತ್ತಿರುವ
ದರ್ಭಾಸನದಿಂದ ದಪ್ಪವಾಗಿ ಕಾಣಬರುವ ಕೃಷ್ಣಾಜಿನದ ಸುರುಳಿ
ಯುಳ್ಳ ಭುಜವೂ, ಬೆನ್ನಿನಿಂದ ಬಲಭುಜದಮೇಲೆ ಬಂದ ಕೃಷ್ಣಾ
ಜಿನದ ದಾರದ ಕೊನೆಗೆ ಕಟ್ಟಲ್ಪಟ್ಟ ತಾಮ್ರದ ಗಿಂಡಿಯನ್ನೂ ನಾರು
ಸಂಚಿಯನ್ನೂ ಧರಿಸಿದ ಬಣ ಎದೆಯೂ, ಉಳ್ಳ ಕಪ್ಪನೆಯ ಉದ್ದ
ವಾದ ವಿಗ್ರಹವೊಂದು ದ್ವಾರಬಂಧದುದ್ದಕ್ಕೂ ನಿಂತುಕೊಂಡಿತ್ತು. ಕದ
ತೆರೆಯುತ್ತಲೇ ಆವಿಗ್ರಹವು ನೆಟ್ಟನೆ ಪಶ್ಚಿಮದ ಮನೆಯಕಡೆಗೆ ಬಂದು
ಬಳಿಗೆ ರಾಜಶೇಖರನಿಗಿದಿರಾಗಿ ನಿಂತುಕೊಂಡಿತು.

ರಾಜಶೇಖರ—"ಶಾಸ್ತ್ರಿಗಳೇ! ನಿಮ್ಮದಾವೂರು?"

ಶಾಸ್ತ್ರಿ—"ನಮ್ಮದು ಕಾನೂರಗ್ರಹಾರ. ನಮ್ಮ ಮನೆಹೆಸರು
ಪುಲುಸುವಾರು. ನನ್ನ ಹೆಸರು ವೀರಯ್ಯಸೋಮಯಾಜಿ. ನಿಮ್ಮ
ಕೀರ್ತಿ ಜಗದ್ವಿಖ್ಯಾತವಾದುದು; ಹತ್ತುಮಂದಿ ಬ್ರಾಹ್ಮಣರಿಗಿಷ್ಟನ್ನ
ವನ್ನಿಟ್ಟರೂ ಸಂಭಾವನೆಕೊಟ್ಟರೂ ಭೂಮಿಯಮೇಲೆ ಸಾರ್ಥಕ
ಜನ್ಮವು ನಿಮ್ಮದಲ್ಲದೆ ನನ್ನಂತಹ ವ್ಯರ್ಥನ ಬಾಳೇಕೆ?"

ರಾಜಶೇಖರ—"ಈಹೊತ್ತು ಕಾರ್ತಿಕಸೋಮವಾರ; ನೀವು
ರಾತ್ರಿಯವರೆಗೂ ಉಪವಾಸವಿರುವಿರಾ?"

ಸೋಮಯಾಜಿ—"ಮುದುಕನಾದೆನು; ಈಗಿರಲಾರೆನು."

ರಾಜಶೇಖರ—"ಸೋಮಯಾಜಿಯವರೇ! ಬಿಸಿಲಲ್ಲಿ ದಣಿದು
ಬಂದಿದೀರಿ; ಬೇಗ ಬಾವಿಯ ಬಳಿಗೆ ಹೋಗಿ ನಾಲ್ಕು ಬಿಂದಿಗೆಯ
ನೀರುಹಾಕಿ ಕೊಂಡು ಬನ್ನಿ, ಬಡಿಸುತಿದಾರೆ."

ಸೋಮಯಾಜಿ—"ನಿಮಗಿಷ್ಟವಾಗಲಿ. ನನ್ನದೊಂದು ಬಿನ್ನ
ಹವಿದೆ—ನನಗೆ ಸ್ವಹಸ್ತಪಾಕವಾಗಬೇಕು. ಒಲೆಯನ್ನು ಸ್ವಲ್ಪ ಗೋ
ಮಯದಿಂದ ಶುದ್ಧಿಮಾಡಿ ಬೇಕಾದ ನಾಲ್ಕು ವಸ್ತುಗಳನ್ನು ಸಿದ್ಧಪಡಿಸಿ
ಕೊಟ್ಟರೆ ಸ್ನಾನಮಾಡಿ ಬಂದು ಪಾಕಮಾಡಿಕೊಳ್ಳುವೆನು."

ರಾಜಶೇಖರ—" ಬೇರೇ ಬಲೆಯಿಲ್ಲ, ದಯೆಮಾಡಿ ನೀವು ನಮ್ಮ ಅಡಿಗೆಗೇ ಬರಬೇಕು."

ಸೋಮಯಾಜಿ—"ನನಗೆ ಸ್ತ್ರೀಪಾಕವನ್ನು ಮುಟ್ಟುವುದಿಲ್ಲವೆಂಬ ನಿಯಮ ; ನಿಮ್ಮ ಮನೆಯಲ್ಲಡಿಗೆ ಮಾಡುವರು ಪುರುಷರೇ ಅಲ್ಲವೆ?"

ರಾಜಶೇಖರ—"ನಮ್ಮ ಚಿಕ್ಕಮ್ಮನವರ ಮಗಳು ಅಡಿಗೆಮಾಡಿ ದಾಳೆ; ನಮ್ಮ ಮನೆಯಲ್ಲಾವಾಗಲೂ ಸ್ತ್ರೀಯರೇ ಅಡಿಗೆಮಾಡು ವುದು."

ಸೋಮಯಾಜಿ—"ಅಯ್ಯೋ! ಸ್ತ್ರೀಪಾಕಮಾತ್ರವಲ್ಲದೆ ವಿಯೋ ಗಿಪಾಕವನ್ನು ಕೂಡ ನಾನು ಹೇಗೆ ತಿನ್ನಲಿ; ಸ್ವಲ್ಪ ಎತ್ತಿಸರಿಡಿಸಿಕೊ ಟ್ಟರೆ ನಾನು ಬಂದು ಇಳಿಸಿಕೊಳ್ಳುವೆನು."

ರಾಜಶೇಖರ—" ಈದಿನ ಸಂದರ್ಭ ಬೀಳದು ; ಈಹೊತ್ತು ನೀವು ಮತ್ತೆಲ್ಲಾದರೂ ದಯೆಮಾಡಬಹುದು."

ಸೋಮಯಾಜಿ—(ಸ್ವಲ್ಪವಾಲೋಚಿಸಿ), " ನಾನು ಬಲ್ಲೆನು, ನಿಮ್ಮದು ಮೊದಲಿಂದಲೂ ಶಿಷ್ಟಸಂಪ್ರದಾಯ—ನಿಮ್ಮ ತಾತನವ ರೆಷ್ಟೋ ಕರ್ಮಿಷ್ಠರು; ನಿಮ್ಮ ತಂದೆಯವರು ಕೇವಲ ಬ್ರಹ್ಮವೇತ್ತರು; ನಿಮ್ಮ ಮನೆಯಲ್ಲಿ ನನಗಭ್ಯಂತರವಿಲ್ಲ; ಆದರೆ ಬಂದುಕಡೆ ಭೋ ಜನಮಾಡಿದೆನೆಂದರೆ ಮತ್ತೊಂದುಕಡೆ ಕೂಡ ಭೋಜನಮಾಡೆಂ ದೆನ್ನುವರು. ನಾನಿಲ್ಲಿ ಊಟಮಾಡಿದ ಸಂಗತಿಯನ್ನು ನೀವು ಗೋಪ್ಯವಾಗಿಡಬೇಕು. ಕಾರ್ತಿಕಸೋಮವಾರವಾದಕಾರಣ ಗೋದಾ ವರಿಗೆ ಹೋಗಿ ನಿಮಿಷದಲ್ಲಿ ಸ್ನಾನಮಾಡಿ ಬರುವೆನು. ಇಷ್ಟರೊ ಳಗೆ ಬಡಿಸುತ್ತಿರಲಿ" ಎಂದು ಹೇಳಿ ಪೇರಯ್ಯಸೋಮಯಾಜಿ ಕೃಷ್ಣಾಜಿನವನ್ನೂ ನಾರು ಸಂಚಿಯನ್ನೂ ನಡುಮನೆಯಲ್ಲಿಟ್ಟು ಗೋ ದಾವರಿಗೆ ಹೋಗಿ ಸ್ನಾನಮಾಡಿ ಬಂದು, ಕೃಷ್ಣಾಜಿನವನ್ನು ಹಜಾರ ದಲ್ಲಿ ನೆಲದಮೇಲೆ ಹಾಸಿಕೊಂಡು, ಅದರ ಮೇಲೆ ದರ್ಭಾಸನವನ್ನು ಹಾಕಿಕೊಂಡು ಕುಳಿತು, ಗೋಮುಖದಲ್ಲಿ ಕೈಯಿಟ್ಟುಕೊಂಡು ಬಳಗೆ ರುದ್ರಾಕ್ಷಮಾಲೆಯನ್ನು ತಿರುಗಿಸುತ್ತ ಕಣ್ಣು ಮುಚ್ಚಿಕೊಂಡು

ಜಪಮಾಡುವುದಕ್ಕಾರಂಭಿಸಿದನು. ಆತನು ಅಫೀಮುತಿನ್ನುವನೆಂಬ ಪ್ರಸಾದರಾಯನ ಮಾತಿನಿಂದಲೂ, ಬಡಿಸಿದ ಅನ್ನವೂ ಪಲ್ಯಗಳೂ, ಆರಿಹೋಗುತ್ತಿರುವುದನ್ನು ನೋಡಿ ಎಲೆಗಳಮುಂದೆ ಕುಳಿತಿದ್ದವರೆದ್ದುಬಂದು ಬಹಳವಾಗಿ ಕೂಗಿದ್ದರಿಂದಲೂ, ಸೋಮಯಾಜಿ 5 ಎರಡು ಗಳಿಗೆಯ ಮೇಲೆ ಮೌನವನ್ನು ಬಿಟ್ಟು ಎದ್ದುಬಂದು ಎಲೆಯ ಮುಂದೆ ಕುಳಿತುಕೊಂಡನು. ಆಗ ಎಲ್ಲರೂ ಪರಿಷೇಚನಮಾಡಿ ಭೋಜನಮಾಡುವುದಕ್ಕೆ ಮೊದಲುಮಾಡಿದರು.

ರಾಜಶೇಖರ—“ ರಾಜಮಹೇಂದ್ರದಿಂದ ಲಗ್ನಪತ್ರಿಕೆಯನ್ನು ತಂದ ನೀರ್ಗಾವಡಿವೆಂಕಯ್ಯನು ಕಾಣಿಸಲಿಲ್ಲ, ಅವನೆಲ್ಲಿ ಕುಳಿ10 ತಿದಾನೆ ? ”

ವೆಂಕಯ್ಯ—“ ಅಯ್ಯ ! ಅಯ್ಯ ! ಇದುಗೋ ! ಸೋಮಯಾಜಿಯವರ ಹಿಂದಿರುವ ಮೂಲೆಯೆಲೆಯಮುಂದೆ ಕುಳಿತಿದೇನೆ. ”

ಸೋಮಯಾಜಿ—“ ಈಪಾಕ ದಿವ್ಯವಾಗಿದೆ ; ಇದರ ಮುಂದೆ ನಳಭೀಮಪಾಕಗಳೇಕೆ ? ”

15 ವೆಂಕಯ್ಯ—“ ಸೋಮಯಾಜಿಯವರೇ ! ನಿನ್ನೆಸತ್ರದಲ್ಲಿ ಅಡಿಗೆ ಮಾಡಿದ್ದ ಹೀರೆಯಕಾಯಿ ಇಷ್ಟು ರುಚಿಯಾಗಿರಲಿಲ್ಲ. ”

ರಾಜಶೇಖರ—“ ಯಾವಸತ್ರ ? ”

ವೆಂಕಯ್ಯ—“ ನಿನ್ನೆ ರಾಜಮಹೇಂದ್ರದಲ್ಲಿ ಒಬ್ಬ ಕೋಮಟಿಯವನ ಮನೆಯಲ್ಲಿ ಗೃಹಪ್ರವೇಶಸಂತರ್ಪಣೆ ನಡೆಯಿತು, ಪೇರಯ್ಯ 20 ಅಡಿಗೆ ಮಾಡಿದ್ದನು, ಅಲ್ಲಿ ಸೋಮಯಾಜಿಯವರೂ ನಾನೂ ಒಂದೇ ಪಙ್ತಿಯಲ್ಲಿ ಕುಳಿತಿದ್ದೆವು. ”

ಈಪ್ರಕಾರವಾಗಿ ಅನ್ಯೋನ್ಯಸಂಭಾಷಣೆಗೈಯುತ್ತ ಊಟ ಮಾಡಿ ಎಲ್ಲರೂ ಪಶ್ಚಿಮದ ಮನೆಯ ಹಿತ್ತಿಲಲ್ಲಿ ಕೈತೊಳೆದುಕೊಂಡು ತೇಗುತ್ತ ಹೊಟ್ಟೆಗಳನ್ನು ಸವರಿಕೊಳ್ಳುತ್ತ ಬಂದು ಹಜಾರದಲ್ಲಿ 25 ಕುಳಿತುಕೊಂಡರು. ಸೋಮಯಾಜಿಯು ಮೊಟ್ಟಮೊದಲು ನಾಲ್ಕು ದಿನಗಳಿರಬೇಕೆಂದೇ ಬಂದಿದ್ದರೂ, ಭೋಜನಕಾಲದಲ್ಲಿ ನಡೆದ ಸಂಭಾ

ಷಣೆಯಿಂದ ನಿಲ್ಲುವುದಕ್ಕೆ ಮನಸ್ಸೊಪ್ಪದೆ ಸಂಭಾವನೆಯನ್ನು ಸಹ ಕೇಳದೆ ಕೂಡಲೆ ತಾಂಬೂಲವನ್ನು ತೆಗೆದುಕೊಂಡು ಹೊರಟು ಹೋದನು.

---

## ನಾಲ್ಕನೆಯ ಪ್ರಕರಣ.

ಪುರಾಣಕಾಲಕ್ಷೇಪ—ರಾಜಶೇಖರನ ಸ್ಥಿತಿ—ಆತನ ಭಾವಮೈದುನನಾದ ದಾಮೋದರಯ್ಯನ ಚರಿತ್ರೆ—ಮಿತ್ರನಾದ ನಾರಾಯಣಮೂರ್ತಿಯ ಕಥೆ—ಕಣಿ ಕೇಳುವುದು.

ರಾಜಶೇಖರನು ಭೋಜನಮಾಡಿದ ತರುವಾಯ ಒಂದು ನಿದ್ದೆ ಹೋಗಿ ಎದ್ದು ತಾಂಬೂಲಹಾಕಿಕೊಂಡು ಕಚೇರಿಚಾವಡಿಗೆ ಬಂದು 5 ಕುಳಿತುಕೊಂಡನು. ಅದಕ್ಕೆ ಮೊದಲೇ ಆಗ್ರಾಮದ ದೊಡ್ಡಮನುಷ್ಯರು ಕೆಲವರು ಬಂದು ತಕ್ಕಸ್ಥಳಗಳಲ್ಲಿ ಕುಳಿತುಕೊಂಡಿದ್ದರು. ಆಗ ರಾಜಶೇಖರನು, 'ಸುಬ್ರಹ್ಮಣ್ಯಾ!' ಎಂದು ಕರೆದ ಕೂಡಲೆ, 'ಅಪ್ಪ' ಎಂದು ಒಳಗಿನಿಂದ ಹದಿನಾರುವರುಷ ವಯಸ್ಸುಳ್ಳ ಕೆಂಪನೆಯ ಹುಡುಗನೊಬ್ಬನು ಬಂದು ಇದಿರಿಗೆ ನಿಂತು 10 ಕೊಂಡನು. ಆತನು ರಾಜಶೇಖರನ ಜ್ಯೇಷ್ಠಪುತ್ರನು. ಸೀತೆ ಹುಟ್ಟಿದ ಎರಡುವರುಷಗಳಮೇಲೆ ಮತ್ತೊಂದು ಗಂಡುಮಗು ಹುಟ್ಟಿತು; ಆದರೆ ಆಮಗು ಎಳವಿನರೋಗದಿಂದ ಹೊಲೆಮನೆಯಲ್ಲೇ ಸತ್ತುಹೋಯಿತು; ಅಲ್ಲಿಂದೀಚೆಗೆ ಮಾಣಿಕ್ಯಾಂಬೆಗೆ ಹೆರಿಗೆಯಿಲ್ಲ. ಸುಬ್ರಹ್ಮಣ್ಯನ ಮುಖವು ಅಂದವಾದುದಾದರೂ ಮೂರು 15 ವರುಷಗಳ ವಯಸ್ಸಿನಲ್ಲಿ ಬಾಲರೋಗ ಬಂದಾಗ ಅರಿಸಿನದ ಕೊನೆಯಿಂದ ಸುಟ್ಟ ಮಚ್ಚೆ ಮಾತ್ರ ಹಣೆಯಲ್ಲಿ ಕೊಂಚ ವಿಕಾರವಾಗಿತ್ತು; ಕಣ್ಣುದೊಡ್ಡವು; ಹಣೆಯು ಉಬ್ಬಾಗಿತ್ತು; ತಲೆಗೂದಲು ಉದ್ದವಾಗಿಯೂ ಕಪ್ಪಾಗಿಯೂ ಇತ್ತು. ಕೈಯಲ್ಲಿ ಚಿನ್ನದ ಬಳೆಗಳೂ ಕಿವಿಯಲ್ಲಿ ವಜ್ರದಹತ್ತಕಡುಕೂ ಅನಾಮಿಕೆಯಲ್ಲಿ ಪಚ್ಚೆ 20 ಕೆತ್ತಿದ ಕುಂದಣದುಂಗುರವೂ ಇದ್ದುವು.

ರಾಜಶೇಖರ— "ಸುಬ್ರಹ್ಮಣ್ಯಾ! ಎಲ್ಲರಜತೆಗೆ ಮಧ್ಯಾಹ್ನ ನೀನು ಭೋಜನಕ್ಕೆ ಬರಲಿಲ್ಲ, ಏಕೆ?"

ಸುಬ್ರಹ್ಮಣ್ಯ— "ಕಾರ್ತಿಕ ಸೋಮವಾರವಾದುದರಿಂದ, ಈದಿನ ರಾತ್ರಿಯವರೆಗೂ ಇದ್ದು ಆಮೇಲೆ ಭೋಜನಮಾಡಬೇಕೆಂದಿದೇನೆ."

ರಾಜಶೇಖರ— "ಒಳಗೆ ಕಾಲುಮಣೆಯಮೇಲೆ ಆದಿಪರ್ವವಿದೆ, ತೆಗೆದುಕೊಂಡು ಬಂದು ಶಾಸ್ತ್ರಿಗಳನ್ನು ಕರೆದುಕೊಂಡು ಬಾ."

ತಂದೆಯ ಆಜ್ಞೆಯಮೇರೆ ಸುಬ್ರಹ್ಮಣ್ಯನು ಒಳಕ್ಕೆ ಹೋಗಿ ಪುಸ್ತಕವನ್ನು ತೆಗೆದುಕೊಂಡು ಬಂದು ತಂದೆಯ ಕೈಗೆ ಕೊಟ್ಟು, ನಡವೆಯಿಂದ ಹೊರಟು ತಲೆಬಾಗಿಲಮೆಟ್ಟಲಿಳಿದು, ದೂರದಲ್ಲಿ ಬರುತಿರುವ ಒಂದು ಕಪ್ಪನೆಯ ವಿಗ್ರಹವನ್ನು ನೋಡಿ, 'ಬೇಗಬನ್ನಿ' ಎಂದು ಕೂಗಿ, ತಾನು ಹಿಂದಿರುಗಿ ಬಂದು ಶಾಸ್ತ್ರಿಗಳು ಬರುತಿದಾರೆಂದು ಹೇಳಿ ಹಜಾರದಲ್ಲಿ ಮಧ್ಯೇ ಪುಸ್ತಕವನ್ನು ಮುಂದಿಟ್ಟುಕೊಂಡು ಕುಳಿತುಕೊಂಡನು. ಇಷ್ಟರಲ್ಲಿ ಹರಿದು ಹೋದ ಹಳೆಯ ಶಾಲುವನ್ನು ಮಡಿಸಿ ಬುಜದಮೇಲೆ ಹಾಕಿಕೊಂಡು, ಚಿನ್ನದ ರೇಕೆದ್ದುಹೋಗಿರುವುದರಿಂದ ನಡುನಡುವೆ ಒಳಗಿನ ಅರಗು ಕಾಣಿಸುತ್ತಿರುವ ಕುಂಡಲಗಳನ್ನು ಕಿವಿಗಳಲ್ಲಿ ಜೋಲಾಡಿಸುತ್ತ ಶಾಸ್ತ್ರಿಯವರು ಬಂದು ಸಭೆಯಲ್ಲಿ ಕುಳಿತುಕೊಂಡರು. ರಾಜಶೇಖರನು ಸಾಹಿತ್ಯಪರನಾದರೂ ಆಕಾಲದಲ್ಲಿ ದೊಡ್ಡ ಪುಸ್ತಕವನ್ನು ಓದಿ ಮತ್ತೊಬ್ಬ ಪಂಡಿತನಿಂದ ಅರ್ಥ ಹೇಳಿಸುವುದು ಬಹಳ ಗೌರವವಾಗಿ ಎಣಿಸಲ್ಪಡುತಿದ್ದುದರಿಂದ, ಆಶಾಸ್ತ್ರಿಯವರು ಬರುವವರೆಗೂ ಪುಸ್ತಕವನ್ನೋದದೆ ಕಾದುಕೊಂಡಿದ್ದನು.

ರಾಜಶೇಖರ— "ಇದೇನು! ತಾವು ಈಹೊತ್ತು ಇಷ್ಟು ಸಾವಕಾಶಮಾಡಿಕೊಂಡು ಬಂದಿರಿ?"

ಶಾಸ್ತ್ರಿ— "ಇಷ್ಟಕ್ಕೆ ಮೊದಲೊಂದುಸಲ ಬಂದು ನೋಡಿಕೊಂಡು ಹೋದೆನು. ತಾವು ಇನ್ನೂ ಎದ್ದಿಲ್ಲವೆಂದು ಕೇಳಿ ಬೇರೆ

ಮತ್ತೊಬ್ಬ ದೊಡ್ಡ ಮನುಷ್ಯನೊಡನೆ ಮಾತನಾಡಬೇಕಾದ ಕೆಲಸ
ವಿದ್ದುದರಿಂದ ತಾವು ಏಳುವ ಹೊತ್ತಿಗೆ ಪುನಃ ಬರೋಣವೆಂದು
ಹೊರಟುಹೋದೆನು. ಆತನೊಡನೆ ಮಾತನಾಡುವುದು ಕೊಂಚ
ಸಾವಕಾಶವಾಯಿತು, ಕ್ಷಮಿಸಬೇಕು—ಅಪ್ಪಾ! ಸುಬ್ರಹ್ಮಣ್ಯಾ!
ಪುಸ್ತಕವನ್ನು ಬಿಚ್ಚು." 5

ಸುಬ್ರಹ್ಮಣ್ಯನು ಪುಸ್ತಕವನ್ನು ಬಿಚ್ಚುತ್ತ, 'ತುಂಡಮುನೇ
ಕದಂತಮುನುದೋರವು ಬೊಜ್ಜಯು' ಎಂಬ ವಿಘ್ನೇಶ್ವರಸ್ತವಪದ್ಯ
ಗಳನ್ನು ಅರಂಭಿಸಿ ಓದುತಿರುವಲ್ಲಿ ಶಾಸ್ತ್ರಿಯವರು ಕೂಡ ಆಪದ್ಯ
ವನ್ನು ಕೊನೆಯವರೆಗೂ ಹೇಳಿದತರುವಾಯ, 'ಅಂಜಲಿಜೇಸಿ ಮೊ
ಕ್ಕೆದ ಮದಂಬಿಕ' ಮೊದಲಾದ ಸರಸ್ವತೀಪ್ರಾರ್ಥನವನ್ನೂ ತರು 10
ವಾಯ 'ಪ್ರಾಂಶುಪಯೋದನೀಲತನುಭಾಸಿತ' ಮೊದಲಾದ ವ್ಯಾಸ
ಸ್ತೋತ್ರವನ್ನೂ ಕೂಡಲೆ ಮತ್ತೆ ಕೆಲವು ಪದ್ಯಗಳನ್ನೂ ತಾವೂ
ಕಲೆತು ಹೇಳಿದರು. ಇಷ್ಟರಲ್ಲಿ ಸುಬ್ರಹ್ಮಣ್ಯನು ಹಿಂದಣ ದಿವಸ
ನಿಲ್ಲಿಸಿದ್ದ ಭಾಗವನ್ನು ತೆರೆದು, ಅರ್ಜುನನು ದ್ವಾರಕಾನಗರಕ್ಕೆ
ಹೊರಟ ಸಂದರ್ಭದಲ್ಲಿನ "ದ್ವಾದಶಮಾಸಿಕವ್ರತಮು ಧರ್ಮವಿಧಿಂ 15
ಜರಪಂಗನೇಗಿಗಂ । ಗಾನದಿಮಹಾನದಿಹಿಮವದಾದಿಮಹಾಗಿರಿದರ್ಶನಂ
ಬುಮಾ । ಪಾದಪಯೋಜ ದರ್ಶನಮು ಪನ್ನಗಜೇಯುಟಜೇಸಿ ಪೂರ್ವ
ಸಂ । ಪಾದಿತಸರ್ವಪಾಪಮುಲುವಾಸೆ ಭೃಶಂಬುಗನಾಕುನಚ್ಯುತಾ"
ಎಂಬ ಪದ್ಯವನ್ನು ಓದಿದನು. ಆಗ ಶಾಸ್ತ್ರಿಯವರು ಪದ್ಯದಲ್ಲಿರುವ
ಕೆಲವನ್ನೂ, ಇಲ್ಲದ ಕೆಲವನ್ನೂ ಕಲ್ಪಿಸಿ ದೀರ್ಘಗಳೆಳೆಯುತ್ತ ಅರ್ಥ 20
ಹೇಳುವುದಕ್ಕೆ ಮೊದಲಿಟ್ಟರು. ಅರ್ಥಹೇಳುತಿರುವ ಕಾಲದಲ್ಲಿ
ಸುಬ್ರಹ್ಮಣ್ಯನು ಪುಸ್ತಕದಸೂತ್ರಕ್ಕೆ ಕಟ್ಟಿದ್ದಕಡ್ಡಿಯನ್ನು ಕೈಯಲ್ಲಿ
ಹಿಡಿದುಕೊಂಡು ತಿರುಗಿಸುತಿದ್ದನು. ಅದಂನೋಡಿ ಶಾಸ್ತ್ರಿಯವರು
ಉಲುಕಿಬಿದ್ದು ಮೂಗಿನಮೇಲೆ ಬೆರಳಿಟ್ಟುಕೊಂಡು, 'ಪುಸ್ತಕವನ್ನೋ
ದುತಿರುವಾಗ ಅದನ್ನಾಪ್ರಕಾರವಾಗಿ ಆಡಿಸಬಹುದೆ? ವ್ಯಾಸರು 25
ಅದರಮೇಲೆ ಕೂಳಿತಿರುವರಲ್ಲ!' ಎಂದು ಹತ್ತಿರಿರುವರಿಗೆ ಆವಿಷಯ
ವಾದ ಕಥೆಯೊಂದನ್ನು ಹೇಳಿದರು. ಆಮಾತಿನಮೇಲೆ ಅದರಲ್ಲಾರೋ

ಕೇಳಿದ್ದಕ್ಕೆ ಪ್ರತ್ಯುತ್ತರವಾಗಿ, 'ಸಮೀಪದಲ್ಲಿ ವ್ಯಾಸರು ಹೋಗು
ವಾಗಲ್ಲದೆ ಅವರು ಸ್ಮರಣೆಗೆ ಬಾರರೆಂದೂ ಅವರು ಆಗ ಆಮಾರ್ಗ
ದಲ್ಲಿಯೇ ಆಕಾಶದಮೇಲೆ ದಿವ್ಯವಿಮಾನವನ್ನು ಹತ್ತಿಕೊಂಡು ಹೋಗು
ತ್ತಿದ್ದಾರೆಂದೂ ಹೇಳಿ, ಆಕಾಶದಕಡೆ ನೋಡಿ ಕಣ್ಣು ಮುಚ್ಚಿಕೊಂಡು
5 ಮೂರು ನಮಸ್ಕಾರಗಳನ್ನು ಮಾಡಿದರು. ಈಪ್ರಕಾರವಾಗಿ ಸಂಜೆಯು
ಹೊತ್ತಿಗೆ ಆದಿಪರ್ವ ಮುಗಿಯಲು ಆದಿವಸಕ್ಕೆ ಪುರಾಣಕಾಲಕ್ಷೇಪ
ವನ್ನು ಸಾಕುಮಾಡಿ, "ಸ್ವಸ್ತಿಪ್ರಜಾಭ್ಯಃ" ಮೊದಲಾದ ಶ್ಲೋಕ
ವನ್ನು ಹೇಳಿ ಅವರವರ ಮನೆಗೆ ಅವರವರು ಹೊರಟುಹೋದರು.

ರಾಜಶೇಖರನ ಮನೆಗೆ ನಿತ್ಯವೂ ಬಂಧುಗಳು ನಾಲ್ವತ್ತುತಲೆ
10 ಕಳೆದುಹೋಗಿದ್ದರೂ ವಂಶವೃಕ್ಷಸಹಿತ ನೋಡುವವಶ್ಯಕವಿಲ್ಲದೆಯೇ
ತಮ್ಮ ಬಂಧುತ್ವವನ್ನು ಜ್ಞಾಪಕವಿಟ್ಟುಕೊಂಡು, ರಾಜಶೇಖರನಮೇ
ಲಿನ ಪ್ರೇಮದಿಂದ ಆತನನ್ನು ನೋಡಿ ಆದರಿಸಿ ಹೋಗಬೇಕೆಂಬುದ್ದೇಶ
ವುಳ್ಳವರಾಗಿ ಬಂದು ತಿಂಗಳುಗಟ್ಟಲೆ ಇದ್ದು ತಿಂದುಹೋಗುತ್ತ, ವಸ್ತ್ರಾ
ದಿಗಳನ್ನು ಬಹುಮಾನವಾಗಿ ಪಡೆಯುತ್ತಿರುವರು. ಊರಲ್ಲಿರುವ
15 ದೊಡ್ಡಮನುಷ್ಯರೂ ಪರಿಚಿತರಾದವರೂಕೂಡ ರಾಜಶೇಖರನ ಮನೆ
ಯಲ್ಲಿ ಅಡಿಗೆ ದಿವ್ಯವಾಗಿ ಮಾಡುವರೆಂದು ಶ್ಲಾಘಿಸುತ್ತ ತಿಂಗಳಿಗೆ ಅರ್ಧ
ದಿನಗಳು ಅಲ್ಲಿಯೇ ಊಟಮಾಡುತ್ತಿರುವರು. ಅವರು ಮಾಡುವ
ಸ್ತೋತ್ರಪಾಠಗಳಿಗುಬ್ಬಿ ರಾಜಶೇಖರನೂ ಅವರು ಬಂದಾಗೆಲ್ಲ ಭಕ್ಷ್ಯ
ಗಳನ್ನೂ ಕ್ಷೀರಾನ್ನಮೊದಲಾದುವುಗಳನ್ನೂ ಮಾಡಿಸಿ ಅವರಿಂದ
20 ಮೆಚ್ಚಿಸಿಕೊಳ್ಳಬೇಕೆಂದೇ ಇದ್ದನು. ಅನ್ನ ಪಕ್ವವಾಗದಿದ್ದರೂ ಸಾರು
ಕಾಯದಿದ್ದರೂ ತೊವ್ವೆ ಬೇಯದಿದ್ದರೂ ಕೂಡ ಅವರಮನೆಯ ಅಡಿಗೆ
ಚೆನ್ನಾಗಿಲ್ಲವೆಂದು ಹೇಳಿದವರೇ ಇಲ್ಲ—ಸುಮ್ಮನೆ ಬಂದ ಪದಾರ್ಥ
ದಲ್ಲಾವಾಗಲೂ ರುಚಿಯಧಿಕವಾಗಿರುವುದಲ್ಲವೆ ? ಕೆಲವರು ಬಂಧು
ಗಳು ತಾವು ಹೊರಟುಹೋಗುವಲ್ಲಿ ಸ್ವಲ್ಪಹಣವನ್ನು ಸಾಲವಾಗಿ
25 ತೆಗೆದುಕೊಂಡು ಹೋಗಿ ಅದುವರೆಗೂ ಬಹಳವಾಗಿ ಬಂದು
ಹೋಗುತಿದ್ದವರಾದರೂ ಆಗಿನಿಂದ ತೀರುಪಾಟಿಲ್ಲದೆ ಸಾಲತೀರಿಸುವು
ದಕ್ಕೆ ಮತ್ತೆಂದಿಗೂ ಬರುವವರಾಗುತಿರಲಿಲ್ಲ. ಧನವಂತನಾದುದರಿಂದ

ಆತನಿಗೆಲ್ಲರೂ ಮಿತ್ರರಾಗಿದ್ದರು. ಅಮಿತ್ರಕೋಟಿಯಲ್ಲಿ ಒಬ್ಬನಾದರೂ ನಿಜವಾದ ಆಪ್ತನಿದಾನೆಯೋ ಇಲ್ಲವೋ ಎಂಬ ಸಂಗತಿಯನ್ನು ಮಾತ್ರ ಆತನಿಗೆ ಧನಲಕ್ಷ್ಮಿ ತಿಳಿಸಿದವಳಲ್ಲ. ಅಂತಹ ಮಿತ್ರೋತ್ತಮರೆಲ್ಲರೂ ರಾಜಶೇಖರನಿಗೆ ಸ್ತುತಿಪಾಠಗಳಿಂದ ಭೂಮಿಯ ಮೇಲೆಯೇ ಸ್ವರ್ಗಸುಖವನ್ನುಂಟುಮಾಡಿ ಆತನನ್ನಾನಂದಪಡಿಸುತ್ತ, ತಾವು ಆತನೀಯುವ ಧನಕನಕವಸ್ತುವಾಹನಗಳನ್ನಾತನ ಪ್ರೀತಿಗೋಸ್ಕರ ಅಂಗೀಕರಿಸುತಿದ್ದರು. ನಿತ್ಯವೂ ಯಾಚಕರು ಅಸಂಖ್ಯಾತವಾಗಿ ಬಂದು ತಮ್ಮ ಕಷ್ಟಕಥೆಗಳನ್ನು ಪದ್ಯರೂಪವಾಗಿ ಹೇಳಿ ಕೊನೆಗೆ ತಮಗೇನಾದರೂ ಕೊಡಬೇಕೆಂದು ತೇಲಿಸುತಿದ್ದರು—ಅಂತವರು ನಟಿಸುವ ಆಪತ್ತುಗಳೆಲ್ಲವನ್ನೂ ಆತನು ನಿಜವಾದುವುಗಳಂತೆಯೇ ಭಾವಿಸಿ ಅವರಿಗೆ ಸಹಾಯಮಾಡುತಿದ್ದನು. ಕೆಲವರು ಬ್ರಾಹ್ಮಣರು ಮಗನಿಗೆ ಮದುವೆಮಾಡಬೇಕೆಂದೂ ಉಪನಯನ ಮಾಡಬೇಕೆಂದೂ ತಾವು ಯಜ್ಞಮಾಡುವೆವೆಂದೂ ಸತ್ರಸಮಾರಾಧನೆಗಳನ್ನು ಮಾಡಿಸುವೆವೆಂದೂ ಹೇಳಿ ಆತನಿಂದ ಧನವನ್ನಾರ್ಜಿಸಿಕೊಂಡು ಹೋಗುತ್ತಿರುವರು. ಮಿತ್ರರ ಸಂತೋಷಕ್ಕೋಸುಗ ರಾಜಶೇಖರನ ಮನೆಯಲ್ಲಿ ವಿಶೇಷವಾಗಿ ಗಾನವಿನೋದಗಳೂ ನಾಟ್ಯವಿಶೇಷಗಳೂ ಪಾರಿಜಾತಾದಿನಾಟಕಗೋಷ್ಠಿಗಳೂ ನಡೆಯುತ್ತಿರುವುವು. ಮೋಸಗಾರರು ಕೆಲವರು ತಮಗೆ ಬೆಲೆಯಾಗದ ಉಂಗುರಗಳು ಮೊದಲಾದ ವಸ್ತುಗಳನ್ನು ತಂದು, ಅವುಗಳಲ್ಲಿ ಕೆತ್ತಿರುವ ಕಲ್ಲುಗಳ ಬೆಲೆಯರಿತು, ಕೊಳ್ಳಲುಳ್ಳ ರಸಜ್ಞರು ರಾಜಶೇಖರನಲ್ಲದೆ ಮತ್ತೊಬ್ಬರಿಲ್ಲವೆಂದು ಮುಖಪ್ರೀತಿಯಾಗಿ ಮಾತಾಡಿ, ವಸ್ತುಗಳು ಅಷ್ಟು ಬೆಲೆಯುಳ್ಳವಲ್ಲವಾದರೂ ಮಾತುಗಳನ್ನೇ ಹೆಚ್ಚು ಬೆಲೆಗೆ ವಿಕ್ರಯಿಸಿ ಹೋಗುತಿದ್ದರು. ಗ್ರಾಮದಲ್ಲಿನ ವೈದಿಕಬೃಂದದ ಪ್ರೇರಣೆಯ ಮೇಲೆ ಸಪ್ತಸಂತಾನಗಳಲ್ಲಿ ಒಂದಾದ ದೇವಾಲಯ ನಿರ್ಮಾಣಮಾಡನಿಶ್ಚಯಿಸಿ, ರಾಜವರದ ಬೆಟ್ಟದಿಂದ ಕರಿಯಕಲ್ಲುಗಳನ್ನು ತರಿಸಿ ರಾಜಶೇಖರನು ರಾಮಪಾದಕ್ಷೇತ್ರಕ್ಕೆ ಸಮೀಪದಲ್ಲಿ ಆಂಜನೇಯನಿಗೆ ಗುಡಿಕಟ್ಟಿಸುವುದಕ್ಕಾರಂಭಿಸಿ ನಾಲ್ಕು ಸಂವತ್ಸರ

ಗಳಿಂದ ಕೆಲಸಮಾಡಿಸುತ್ತಿದ್ದನು. ಆದರೆ ಕೆಲಸವು ಅರ್ಧಕ್ಕಿಂತ ಹೆಚ್ಚಾಗಿ ಆಗದೆ ಹೋದರೂ ಕೆಲಸಗಾರರೂ ಕೆಲಸಮಾಡಿಸಲು ತಿರುಗುವ ಆಶ್ರಿತರೂ ಮಾತ್ರ ಕೊಂಚಮಟ್ಟಿಗೆ ಭಾಗ್ಯವಂತರಾದರು. ಈಪ್ರಕಾರವಾಗಿ ತನ್ನನ್ನನಾದರಣೆಮಾಡಿ ಇತರರ ಪಾಲುಮಾಡುತ್ತ ಬಂದುದರಿಂದ, ಧನದೇವತೆಗೆ ಆತನಮೇಲೆ ಆಗ್ರಹಬಂದು ಹೊರಟು ಹೋಗಲು ಪ್ರಯತ್ನಮಾಡುತ್ತಿದ್ದಳಾದರೂ ಚಿರಪರಿಚಯದಿಂದ ಏಕಾಏಕಿ ಬಿಡಲಾರದೆ ಸಂಕೋಚಪಡುತ್ತಿದ್ದಳು. ಈಸಂಗತಿಯನ್ನು ತಿಳಿದುಕೊಂಡು ದಾರಿದ್ರ್ಯದೇವತೆ ಆಗಾಗ ಬಂದು ಹೊರಗಿನಿಂದಲೆ ಇಣಿಕಿನೋಡುತ್ತ, ಭಾಗ್ಯದೇವತೆ ಆತನ ಮನೆಯಲ್ಲಿ ಸ್ಥಳಬಿಟ್ಟ ಕೂಡಲೆ ತಾನು ಪ್ರವೇಶಿಸಬೇಕೆಂದು ನೋಡುತ್ತಿದ್ದಳು. ರುಕ್ಮಿಣಿಯ ಮದುವೆಯಲ್ಲಿ ಕೊಟ್ಟ ಸಂಭಾವನೆಗಳ ನಿಮಿತ್ತವಾಗಿ ರಾಜಶೇಖರನ ಮಾನ್ಯಗಳಮೇಲೆ ಕೊಂಚ ಋಣವಾಗಿದ್ದುದರಿಂದ ಆದರಮೇಲೆ ಬಡ್ಡಿ ಬೆಳೆಯುತ್ತಿದ್ದ ಮಾತ್ರವಲ್ಲದೆ ಮತ್ತಾವತೊಂದರೆಯೂ ಉಂಟಾಗಿರಲಿಲ್ಲ.

ರಾಜಶೇಖರನಿಂದ ಐಶ್ವರ್ಯವಂತರಾದವರು ಅನೇಕರಿದ್ದರೂ ಅವರಲ್ಲೆಲ್ಲ ದಾಮೋದರಯ್ಯನೂ ನಾರಾಯಣಮೂರ್ತಿಯೂ ಮುಖ್ಯರು. ಆಯಿಬ್ಬರಲ್ಲಿ ದಾಮೋದರಯ್ಯನು ರಾಜಶೇಖರನ ಭಾವಮೈದುನನು. ರಾಜಶೇಖರನ ಒಡಹುಟ್ಟಿದವಳನ್ನು ಆತನಿಗೆ ಕೊಟ್ಟಿದ್ದರು; ಆಕೆ ಒಬ್ಬ ಕುಮಾರನನ್ನು ಮಾತ್ರ ಹೆತ್ತು ಕಾಲವಾದಳು; ಆಹುಡುಗನಿಗೀಗ ಹದಿನೈದು ಸಂವತ್ಸರಗಳು; ಆತನ ಹೆಸರು ಶಂಕರಯ್ಯ; ಆತನಿಗೆಂಟು ಸಂವತ್ಸರಗಳು ತುಂಬುವುದಕ್ಕೆ ಮೊದಲೇ ತಾಯಿ ಹೋದುದರಿಂದ ಆತನು ಬಾಲ್ಯದಿಂದ ಸೋದರಮಾವನ ಮನೆಯಲ್ಲೇ ಬೆಳೆದನು. ಆತನಿಗೆ ಸೀತೆಯನ್ನು ಕೊಟ್ಟು ವಿವಾಹ ಮಾಡಬೇಕೆಂದು ತಾಯಿತಂದೆಗಳಿಬ್ಬರಿಗೂ ಇತ್ತು. ಭಾರ್ಯೆ ತೀರಿ ಹೋದ ತರುವಾಯ ದಾಮೋದರಯ್ಯನು ರಾಜಶೇಖರನ ಸಹಾಯದಿಂದಲೇ ಎರಡನೆಯ ವಿವಾಹವನ್ನು ಮಾಡಿಕೊಂಡು, ಆಹುಡುಗಿಯು ಮದುವೆಯಾಗುವವರೆಗೆ ಒಂಭತ್ತು ಸಂವತ್ಸರಗಳ ಒಳಗಿನ

ವಯಸ್ಸಿನವಳಾಗಿದ್ದುದರಿಂದ, ಪ್ರಾಯಸ್ಥಳಾಗಿ ಸಂಸಾರಮಾಡುವುದಕ್ಕೆ
ಪ್ರಾರಂಭಿಸಿ ಒಂದೆರಡು ಸಂವತ್ಸರಗಳುಮಾತ್ರ ಆಗಿದ್ದುವು. ಆತನು
ದ್ವಿತೀಯಕಳತ್ರದಿಂದ ಸಂತಾನವನ್ನಿನ್ನೂ ಹೊಂದಿರಲಿಲ್ಲ. ದಾಮೋ
ದರಯ್ಯನು ಮೊದಲಿಂದ ಬಹಳ ದರಿದ್ರನು; ಆತನಿಗೆ ರಾಜಶೇಖರನ
ತಂಗಿಯನ್ನು ಕೊಡುವಾಗ್ಗೆ ರಾಜಶೇಖರನ ತಂದೆ ಧನವಂತನಾಗಿರ 5
ಲಿಲ್ಲ; ಅವರ ಮೊದಲಿನ ನಿವಾಸಸ್ಥಳ ವಸಂತವಾಡ. ರಾಜಶೇಖರನ
ತಂದೆಯು ತನ್ನ ಮನೆಯ ಗೋಡೆಯನ್ನಿಡಿಸುವುದಕ್ಕೆ ಹುತ್ತಗಳನ್ನ
ಗೆಯಿಸುತ್ತಿರುವಲ್ಲಿ ಒಂದುಕಡೆ ಹಿತ್ತಳಿಯ ಬಿಂದಿಗೆಯಲ್ಲಿ ಧನ ದೊರ
ಕಿತು. ಧನವು ಸಿಕ್ಕಿದ ಮೇಲೆ ಸ್ವಸ್ಥಲದಲ್ಲಿದ್ದರೆ ವಿಶೇಷ ಗೌರವ
ವಿರದೆಂದು ಯೋಚಿಸಿಯೋ ಅಥವಾ ಜನಗಳ ಅಸೂಯೆಗೆ ಭಯ 10
ಹೊಂದಿಯೋ, ರಾಜಶೇಖರನ ತಂದೆಯು ದಾರಪುತ್ರಾದಿಗಳೊಡನೆ
ಅಳಿಯನನ್ನೂ ಹಿಂದಿಟ್ಟುಕೊಂಡು ಬಂದು ಆಗಿನಿಂದ ಈಧವಳಗಿರಿ
ಯಲ್ಲೇ ವಾಸವಾಗಿದ್ದು, ಆ ಸುತ್ತುಮುತ್ತ ಮಾನ್ಯಗಳನ್ನು ಕೊಂಡು
ಕೊಂಚಕಾಲಕ್ಕೆ ಮೃತಿಹೊಂದಿದನು. ಭಾರ್ಯೆ ಹೋಗುವವರೆಗೂ
ದಾಮೋದರಯ್ಯನು ರಾಜಶೇಖರನ ಮನೆಯಲ್ಲೇ ಇದ್ದು, ಆತನ 15
ಹೆಸರುಹೇಳಿ ಧನವನ್ನು ಇತರರ ಹತ್ತಿರ ತಂದು ತಾನಪಹರಿಸುತ್ತ
ಹೊರಕ್ಕೆ ತಿಳಿಸದೆ ಬಚ್ಚಿಟ್ಟುಕೊಳ್ಳುತಿದ್ದನು. ತರುವಾಯ ಸಾಲ
ಗಾರರು ಬಂದು ತೊಂದರೆಪಡಿಸಿದಾಗ ರಾಜಶೇಖರನೇ ಹಣಕೊಡು
ತಿದ್ದನು. ಒಡಹುಟ್ಟಿದವಳು ಹೋದತರುವಾಯ ದಾಮೋದರಯ್ಯನು
ಮಾಡುವ ಅಕ್ರಮಗಳನ್ನು ಸಹಿಸಲಾರದೆ ಒಂದುದಿವಸ ರಾಜಶೇಖ 20
ರನು ಆತನನ್ನು ಕಠಿನವಾಗಿ ಆಕ್ಷೇಪಿಸಿದನು. ಅದರಮೇಲೆ ಕೋಪ
ಬಂದು ದಾಮೋದರಯ್ಯನು ತನ್ನನ್ನು ಭಾವಮೈದುನನು ಉಟ್ಟ
ಬಟ್ಟೆಯಲ್ಲೇ ಮನೆಯಿಂದ ಹೊರಡಹಾಕಿದನೆಂದು ಊರಿನವರೆಲ್ಲರ
ಮುಂದೂ ದೂರುತ್ತ, ದೇಶಾಂತರಹೋಗಿ ಆರು ತಿಂಗಳಮೇಲೆ
ಗಡ್ಡವನ್ನೂ ತಲೆಯನ್ನೂ ಬೆಳಸಿಕೊಂಡು, ಪುನಃ ಬಂದು, ಭೂತ 25
ವೈದ್ಯನೆಂದು ವೇಷಹಾಕಿಕೊಂಡು, ಹಣೆಯಲ್ಲಿ ದೊಡ್ಡದಾಗಿ ಕುಂಕು
ಮದ ಬೊಟ್ಟನಿಟ್ಟುಕೊಂಡು ಬೀದಿಬೀದಿಯಲ್ಲೂ ಸುತ್ತುತಿದ್ದನು.

ಆದುವರೆಗೇ ದಾಮೋದರಯ್ಯನು ತಾನಾರ್ಜಿಸಿಕೊಂಡಿದ್ದ ಧನವನ್ನು
ಬೇರೆ ಜಾಗ್ರತೆಮಾಡಿಕೊಂಡಿದ್ದುದರಿಂದ ಆಗ ಆಧನದಿಂದ ಒಂದು ಮನೆ
ಯನ್ನು ಕಟ್ಟಿ, ಆಗ್ರಾಮದಲ್ಲೇ ಪ್ರತ್ಯೇಕವಾಗಿ ಒಂದುಕಡೆ ವಾಸವಾ
ಗಿದ್ದನು. ಆತನ ಭೂತವೈದ್ಯವು ದಿನದಿನಕ್ಕೆ ಪ್ರಬಲವಾಗಿ ಊರ
ಲ್ಲಾರಿಗಾದರೂ ಕಾಲಲ್ಲಿ ಮುಳ್ಳು ಚುಚ್ಚಿಕೊಂಡರೂ ಆತನ ಕೈಯಿಂದ
ವಿಭೂತಿಯಿಡಿಸುತ್ತಿದ್ದರು. ಈವಿಧವಾಗಿ ದಾಮೋದರಯ್ಯನು ಭಾಗ್ಯ
ವಂತನಾದನಲ್ಲದೆ, ಜನರಿಂದ ವಿಶೇಷ ಗೌರವವನ್ನೂ ಹೊಂದುತಿದ್ದನು.

ಎರಡನೆಯವನಾದ ನಾರಾಯಣಮೂರ್ತಿಯು ಮೊದಲು
ಸದ್ವಂಶದಲ್ಲಿ ಹುಟ್ಟಿದವನಾದರೂ ದುರ್ಮಾರ್ಗರೊಡನೆ ಸಹವಾಸ
ಮಾಡಿ ತನ್ನಲ್ಲಿದ್ದ ಕಾಸುಕವಡೆಯನ್ನು ವ್ಯಯಮಾಡಿ ಬಡವನಾಗಿ
ದ್ದರೂ ಮೇಲಕ್ಕೆ ಧನಿಕನಂತೆ ನಟಿಸುತಿದ್ದನು. ಆತನ ಭಾಗ್ಯವು
ಹೋದರೂ, ಅದನ್ನನುಸರಿಸಿದ್ದ ಚಿಹ್ನೆಗಳು ಮಾತ್ರ ಹೋಗದಿದ್ದು
ದರಿಂದ ನಾರಾಯಣಮೂರ್ತಿಯು ವಿಶೇಷವಾಗಿ ರಾಜಶೇಖರನ ಮನೆಗೆ
ಬಂದು ರಹಸ್ಯವೆಂದು ಹೇಳಿ ರಾಜಶೇಖರನನ್ನು ಒಳಕ್ಕೆ ಕರೆದುಕೊಂ
ಡುಹೋಗಿ ತನ್ನ ದರದನ್ನು ತಿಳಿಸಿ ಹಣವನ್ನು ಸಾಲಕೇಳುತಿದ್ದನು.
ಆಋಣವು ಪುನಃ ತೀರುವುದಲ್ಲವೆಂದು ದೃಢವಾಗಿ ತಿಳಿದಿದ್ದರೂ ರಾಜಶೇ
ಖರನು ಮಾನವಂತರ ಗೌರವವನ್ನು ಕಾಪಾಡುವುದರಲ್ಲಿ ವಿಶೇಷ ಅಭಿ
ಲಾಷೆಯುಳ್ಳವನಾದುದರಿಂದಲೂ ಆತನು ಬಾಲ್ಯದಲ್ಲಿ ತನ್ನ ಸಹಪಾಠಿ
ಯಾದುದರಿಂದಲೂ ಕೇಳಿದ ಮೊತ್ತವನ್ನು ಮತ್ತೊಬ್ಬರರಿಯದಂತೆ
ಕೈಯಲ್ಲಿಟ್ಟು ಕಳುಹುತಿದ್ದನು. ಆತನಾದ್ರವ್ಯದಿಂದ ಸರಿಗೆವಸ್ತ್ರ
ಗಳನ್ನೂ ಸುಗಂಧದ್ರವ್ಯ ಮೊದಲಾದುವುಗಳನ್ನೂ ಕೊಳ್ಳುತ್ತ ಮಿತ್ರ
ರಿಗೆ ಷಡ್ರಸೋಪೇತವಾಗಿ ಔತನಗಳನ್ನು ಮಾಡುತಿದ್ದನು. ಇದಲ್ಲದೆ
ಆತನಿತರಸ್ಥಳಗಳಲ್ಲಿ ಮಾಡಿದ ಋಣಗಳಿಗೋಸ್ಕರ ಋಣಪ್ರದಾತರು
ತೊಂದರೆಯಿಟ್ಟುದರಿಂದ ರಾಜಶೇಖರನು ಆಗಾಗ ತನ್ನ ಸ್ವಂತ ದ್ರವ್ಯ
ದಿಂದ ಮೂರುಸಾವಿರರೂಪಾಯಿಗಳವರೆಗೂ ಕೊಟ್ಟು, ಆತನನ್ನು
ಋಣಬಾಧೆಯಿಂದ ವಿಮುಕ್ತನಾಗಿ ಮಾಡಿದನು. ಎರಡು ಸಂವತ್ಸರ
ಗಳ ಕೆಳಗೆ ನಾರಾಯಣಮೂರ್ತಿಯ ದೊಡ್ಡಪ್ಪನ ಹೆಂಡತಿಯು

ಸಂತಾನವಿಲ್ಲದೆ ಮೃತಿಹೊಂದಿದಾಗ, ಆಕೆಯ ಆಸ್ತಿ ಹತ್ತುಸಾವಿರ ರೂಪಾಯಿ ಆತನಿಗೆ ಸೇರಿತು. ಆಸಂಗತಿ ತಿಳಿದ ಕೂಡಲೇ ರಾಜಶೇಖರನು ಪರಮಾನಂದಭರಿತನಾಗಿ ನಾರಾಯಣಮೂರ್ತಿಯ ಮನೆಗೆ ಹೋಗಿ ಆತನನ್ನಾಲಿಂಗನಮಾಡಿಕೊಂಡು, ತನಗೆ ಕೊಡಬೇಕಾದ ಸಾಲವನ್ನು ತೀರಿಸಬೇಕಾದ ಕೆಲಸವಿಲ್ಲವೆಂದೂ ಯಾವದ್ಧನದಿಂದಲೂ ಗೌರವವಾಗಿ ಸುಖಜೀವನಮಾಡಿಕೊಂಡಿರಬಹುದೆಂದೂ ಹೇಳಿ ಆದರಿಸಿದನು. ರಾಜಶೇಖರನಿಗೆ ಇದುವರೆಗೂ ಸಾಲಮಾಡಬೇಕಾದವಶ್ಯಕತೆ ಅಷ್ಟು ಆಸನ್ನವಾಗದಿದ್ದುದರಿಂದಲೂ ಧನವು ವಿಶೇಷವಾಗಿದ್ದುದರಿಂದಲೂ ನಾರಾಯಣಮೂರ್ತಿಯು ಬೇಕಾದಾಗ ತನ್ನ ಧನವನ್ನು ಬಳಸಿಕೊಳ್ಳಬಹುದೆಂದು ರಾಜಶೇಖರನೊಡನೆ ಅನೇಕಸಾರಿ ಹೇಳುತಿದ್ದನು.

ಒಂದುದಿವಸ ನಾಲ್ಕುಗಳಿಗೆಯ ಹೊತ್ತೇರಿದ ತರುವಾಯ ರಾಜಶೇಖರನು ಕಚೇರಿ ಚಾವಡಿಯಲ್ಲಿ ಅನೇಕರೊಡನೆ ಕುಳಿತುಕೊಂಡಿದ್ದ ಸಮಯದಲ್ಲಿ ರುಕ್ಮಿಣಿಯು ಬಾವಿಯಬಳಿಗೆ ಬಂದು ಅಲ್ಲಿಂದ ಹಿತ್ತಿಲು ಬಾಗಿಲ ಹತ್ತಿರಕ್ಕೆ ಹೋಗಿ ಒಳಗಡೆಯೇ ನಿಂತುಕೊಂಡು, ಹೆಚ್ಚಿದ ಕುಂಬಳಕಾಯಿ ಹೊಟ್ಟನ್ನು ಬೀದಿಯಲ್ಲಿ ಬೀಸಾಡಬಂದ ನೆರೆಮನೆಯ ಹುಡುಗಿಯೊಡನೆ ಮಾತಾಡುತಿದ್ದಳು. ಆಗ ಕೈಯಲ್ಲಿ ಗಗ್ಗರಿಯನ್ನಾಡಿಸುತ್ತ ನೆತ್ತಿಯ ಮೇಲೊಂದುಬುಟ್ಟಿಯನ್ನಿಟ್ಟುಕೊಂಡು, ಒಬ್ಬ ಕಣಿ ಹೇಳುವಳು ಆಮಾರ್ಗವಾಗಿ ಹೋಗುತ್ತ ರುಕ್ಮಿಣಿಯ ಮುಖದಕಡೆ ನಿದಾನಿಸಿ ನೋಡಿ ನಿಂತುಕೊಂಡು, “ ಅಮ್ಮಾ ! ನಿನಗೆ ಶೀಘ್ರವಾಗಿಯೇ ಮೇಲಾಗುವುದು ; ಭಾಗ್ಯವುಂಟಾಗುವುದು. ನಿನ್ನ ಮನಸ್ಸಿನಲ್ಲೊಂದು ವಿಚಾರವನಿಟ್ಟುಕೊಂಡು ಕೃಶಿಸಿ ಹೋಗುತಿದೀಯೆ ; ಕಣಿ ಕೇಳಿದರೆ ನಿನ್ನ ಮನಸ್ಸಿನಲ್ಲಿರುವುದನ್ನು ಸೂಟಿಯಾಗಿ ಹೇಳುವೆನು ” ಎಂದು ಹೇಳಿದಳು. ಆಮಾತುಗಳನ್ನು ಕೇಳಿ, ಅಪ್ರಬೋಧಿಕೆಯನ್ನು ಹಿತ್ತಿಲಿಗೆ ಕರೆದುಕೊಂಡು ಹೋಗಿ ಕೊಟ್ಟಿಗೆಯಲ್ಲಿ ಕುಳ್ಳಿರಿಸಿ ತಾನು ಒಳಕ್ಕೆಹೋಗಿ ಮೊರದಲ್ಲಿ ಅಕ್ಕಿಯನ್ನು ಹಾಕಿತಂದು ಅಕ್ಕಿಯಕಾಳುಗಳನ್ನು ತನ್ನ ಕೈಯಲ್ಲಿ ಹಿಡಿದುಕೊಂಡು, ಮೂರುಸಾರಿ ತನ್ನ

ಕೈಯನ್ನು ಹಣೆಯಮೇಲೆ ಮುಗಿದು ಕಾರ್ಯವನ್ನು ನೆನಸಿಕೊಂಡು, ರುಕ್ಮಿಣಿಯು ತನ್ನ ಕೈಯಲ್ಲಿನ ಅಕ್ಕಿಯಕಾಳುಗಳನ್ನು ಮೊರದಲ್ಲಿ ಹಾಕಿದಳು. ಆಗ ಆಕಣಿಹೇಳುವಳು ತಾನು ಬರಲಿಸಿದ್ದಂತೆ ಇಷ್ಟ ದೇವತೆಗಳನ್ನು ನೆನಸಿಕೊಂಡು ವಾಕ್ಕನ್ನು ಕೊಡೆಂದು ಬೇಡಿಕೊಂಡು 5 ಆಕೆಯ ಕೈಹಿಡಿದುಕೊಂಡು, 'ಭಾಗ್ಯವುಳ್ಳ ಕೈ,' 'ಪ್ರತಿಷ್ಠೆ ಯುಳ್ಳ ಕೈ' ಎಂದು ಹೇಳಿ, "ನೀನೊಂದು ನೆನಪನ್ನು ನೆನಸಿದೀಯೆ, ಬಂದು ಕೋರಿಕೆಯನ್ನು ಕೋರಿದೀಯೆ, ಬಂದು ಮೇಲನ್ನು ಕೇಳಿ ದೀಯೆ; ಅದು ಕಾಯೊ, ಹಣ್ಣೊ, ಸುಳ್ಳೊ, ನಿಜವೊ, ಕೈಗೂ ಡುವುದೊ, ಕೈಗೂಡದೊ ಎಂದು ತೊಂದರೆಪಡುತ್ತಿದೀಯೆ; ಆದು 10 ಕಾಯಲ್ಲ ಹಣ್ಣು, ಸುಳ್ಳಲ್ಲ ನಿಜ, ಶೀಘ್ರವಾಗಿಯೇ ಕೈಗೂಡುವುದು. ಹೆಂಗಸರಕಡೆ ನೆನಪೊ, ಗಂಡಸರಕಡೆ ನೆನಪೊ, ಎನ್ನುವೆಯೇನೊ, ಗಂಡಸರೆಂದರೆ ಗಡ್ಡ, ಹೆಂಗಸರೆಂದರೆ ಬಿಚ್ಚೋಲೆ" ಎಂದು ರುಕ್ಮಿ ಣಿಯ ಮುಖಲಕ್ಷಣಗಳನ್ನು ಚೆನ್ನಾಗಿ ನೋಡಿ 'ಗಂಡಸರಕಡೆಯ ನೆನಪು' ಎಂದಾಗ ಆಕೆಯ ಮುಖವು ಬಂದು ವಿಧವಾಗಿದ್ದುದನ್ನು 15 ನೋಡಿ ಸಂಗತಿಯನ್ನೂಹಿಸಿ, "ನಿನ್ನದು ಗಂಡಸರಕಡೆಯ ನೆನಪು; ಶೀಘ್ರವಾಗಿಯೇ ಕಾರ್ಯವು ತೀರ್ಗಡೆಯಾಗುವುದು; ನಿನ್ನ ರೊಟ್ಟಿ ತುಪ್ಪದಲ್ಲಿ ಬೀಳುವಂತಿದೆ" ಎಂದು ಹೇಳಿ, ಮಿಕ್ಕ ಪ್ರಸಂಗಗಳಿಂದ ರುಕ್ಮಿಣಿಯ ಮನಸ್ಸಿನಲ್ಲಿದ್ದ ಸಂಗತಿಯನ್ನೆಲ್ಲ ತಿಳಿದುಕೊಂಡು, ರುಕ್ಮಿ ಣಿಯ ಗಂಡನು ದೇಶಾಂತರಗತನಾಗಿರುವ ವಾರ್ತೆಯನ್ನದುವರೆಗೇ 20 ಕೇಳಿದವಳಾದುದರಿಂದ, "ನಿನ್ನ ಗಂಡನು ಕೆಟ್ಟ ಸಹವಾಸದಿಂದ ದೇಶಗಳ ಪಾಲಾಗಿ ತಿರುಗುತಿದಾನೆ; ನಿನ್ನ ಮೇಲಿನ ಮೋಹದಿಂದ ಇನ್ನೊಂದು ತಿಂಗಳಲ್ಲೇ ನಿನ್ನನ್ನರಸಿಕೊಂಡು ಬರುವನು" ಎಂದು ಹೇಳಿ ಸಂಚಿಯಲ್ಲಿದ್ದ ಬಂದು ಬೇರನ್ನು ತೆಗೆದು ಅರಿಸಿನದ ದಾರದಿಂದ ಕೈಗೆಕಟ್ಟಿ ಹಳೆಯ ಸೀರೆಯನ್ನೂ ಕುಪ್ಪಸವನ್ನೂ ಪಡೆದು 25 ಕೊಂಡು ಗಂಡನೊಡನೆ ಸಂಸಾರಮಾಡುತಿರುವಾಗ ಹೊಸಸೀರೆಯನ್ನು ಕೊಡೆಂದು ಹೇಳಿ ತನ್ನದಾರಿಯನ್ನು ಹಿಡಿದು ಹೋದಳು. ರುಕ್ಮಿ ಣಿಯು ಪರಮಾನಂದಭರಿತಳಾಗಿ, ಅಷ್ಟು ಸೂಟಿಯಾಗಿ ತನ್ನ

ಮನೋಗತವನ್ನು ತಿಳಿಸಿದುದಕ್ಕೋಸುಗ ಕಣಿಯನ್ನು ಹೇಳಿದವಳ ಮಹತ್ತ್ವವನ್ನು ಮೆಚ್ಚಿಕೊಂಡು ಆಶ್ಚರ್ಯಪಡುತ ಒಳಕ್ಕೆ ಹೋದಳು.

---

## ಐದನೆಯ ಪ್ರಕರಣ.

ಸೀತೆಯ ವಿವಾಹಪ್ರಯತ್ನ—ಬೈರಾಗಿಯ ಪ್ರಸಿದ್ಧಿ—ಆತನು ವೈದ್ಯಕ್ಕೆ ಕುದುರುವುದು—ಜನಾರ್ದನಸ್ವಾಮಿಯುತ್ಸವ—ರುಕ್ಮಿಣಿಯು ಕಾಸಿನಸರ ಹೋಗುವುದು.

ಒಂದುದಿವಸ ಬೆಳಗ್ಗೆ ರಾಜಶೇಖರನು ಸಭೆಯನ್ನು ತೀರಿಸಿಕೊಂಡು ಚಾವಡಿಯಲ್ಲಿ ಕುಳಿತಿರಲು ಸಿದ್ಧಾನ್ತಿಯು ಬಂದು ಕುಳಿತುಕೊಂಡು ತಾಳಿಯೋಲೆಯ ಗೂಡಿಸಿಂದ ಸುಲೋಚನವನ್ನು ತೆಗೆದು ಮೂಗಿನಮೇಲಿಟ್ಟುಕೊಂಡು, ಅದರ ದಾರವನ್ನು ಹಣೆಯಮೇಲೂ ಜುಟ್ಟಿನಮೇಲೂ ಹಿಂದಕ್ಕೆ ಹಾಕಿಕೊಂಡು ತಾಳಿಯೋಲೆಯ ಪುಸ್ತಕಕ್ಕೆ ಕಟ್ಟಿದ ದಾರಕ್ಕೆ ಪೋಣಿಸಿದ್ದ ಚಿಕ್ಕ ಓಲೆಗಳಲ್ಲಿ ನಾಲ್ಕೈದನ್ನು ಮೇಲಕ್ಕೆ ತೆಗೆದು ಹಿಂದಕ್ಕೂ ಮುಂದಕ್ಕೂ ತಿರುಗಿಸುತ್ತ ಅವುಗಳನ್ನು ನೋಡತೊಡಗಿದನು. 10

ರಾಜಶೇಖರ—"ಸಿದ್ಧಾನ್ತಿಯವರೇ! ಸೀತೆಗೆ ಯಾವ ಸಂಬಂಧ ಚೆನ್ನಾಗಿದೆ?"

ಸಿದ್ಧಾನ್ತಿ—"ಚೆನ್ನಾಗಿ ಆಲೋಚಿಸಿ ನೋಡಿದರೆ ಮಂತ್ರಿಪ್ರಗಡ ಬಾಪಿರಾಜುಗಳ ಕುಮಾರನ ಜಾತಕವು ಸರ್ವವಿಧದಲ್ಲೂ ಅನುಕೂಲವಾಗಿ ಕಾಣಬರುತ್ತಿದೆ." 15

ಮಂತ್ರಿಪ್ರಗಡಬಾಪಿರಾಜು ತನ್ನ ಮಗನಿಗೆ ಹೇಗಾದರೂ ಸೀತೆಯನ್ನು ಮಾಡಿಕೊಂಡು ರಾಜಶೇಖರನ ಬಾಂಧವ್ಯದಿಂದ ಬದುಕಬೇಕೆಂದು ಚಿರಕಾಲದಿಂದ ಕೋರಿಕೆಯುಳ್ಳವನಾದುದರಿಂದ, ಈನಡುವೆ ತನ್ನ ಮನೆಯಲ್ಲಿ ನಡೆದ ಸೀತಾಕಲ್ಯಾಣಸಮಯದಲ್ಲಿ ಸಿದ್ಧಾನ್ತಿಗೆ ಒಳ್ಳೆಯ ಧೋತ್ರದ ಜತೆಯನ್ನು ಬಹುಮಾನವಾಗಿ ಕೊಟ್ಟುದಲ್ಲದೆ 20 ಸೀತೆಯನ್ನು ಕೊಡಿಸಿಕೊಟ್ಟಲ್ಲಿ ಇದಕ್ಕಿಂತ ಒಳ್ಳೆಯ ಬಹುಮಾನವನ್ನು ಮಾಡುವುದಾಗಿ ಆಸೆಯಿಟ್ಟಿದ್ದನು.

ರಾಜಶೇಖರ—" ಬಾಪಿರಾಜ್ಯೈಯನ ಮಗನು ಕಪ್ಪನೆಯವನು ; ಓದುಬರಹದಲ್ಲಿಯೂ ತಿಳಿವಿಲ್ಲದವನೆಂದು ಕೇಳುತ್ತೇನೆ. ಅವನಾಗಲೇ ದುಸ್ಸಹವಾಸದಿಂದ ತಿರುಗುವುದಕ್ಕಾರಂಭಿಸಿದಾನಂತೆ ! ಅವನಿಗೆ ಸೀತೆಯನ್ನು ಕೊಡೆನು. ನಮ್ಮ ಶಂಕರಯ್ಯನ ಜಾತಕ ಹೇಗಿದೆ ? "

5 ಸಿದ್ಧಾಂತಿ—" ನಿಮ್ಮ ಸೋದರಳಿಯನ ಜಾತಕವನ್ನು ನೋಡಿದೇನೆ ; ಸಮಸ್ತವಿಧದಲ್ಲೂ ದಿವ್ಯಜಾತಕವಾದರೂ ಜನ್ಮನಕ್ಷತ್ರ ಕೃತ್ತಿಕೆ ; ನಮ್ಮ ಸೀತೆಯದು ಕೂಡ ಕೃತ್ತಿಕಾನಕ್ಷತ್ರವೆ !—ಶ್ಲೋ || ಅಜೈಕಪಾದ್ವಿಶಾಖಾಚಪುನರ್ವಸ್ವಥಕೃತ್ತಿಕಾ | ಮೃಗಶೀರ್ಷಂಚಚಿತ್ತಾಚಸವಿತೋತ್ತರಫಲ್ಗುನೀ | ಜ್ಯೇಷ್ಠಾಚವಿಶ್ವತೋಯಂಚನಕ್ಷತ್ರೈ
10 ಕ್ಯೇವಿನಶ್ಯತಿ | ಏಕರಾಶೌಪೃಥಗ್ಧಿಷ್ಣ್ಯೇಚೋತ್ತಮಂಪಾಣಿಪೀಡನಂ|| —ಎಂದರೆ ಮೇಲೆಹೇಳಿದ ನಕ್ಷತ್ರಗಳ ಐಕ್ಯದಲ್ಲಿ ಕನ್ಯಾವರರಿಗೆ ನಾಶವು ಸಂಭವಿಸುವುದೆಂದು ಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ. ಬಾಪಿರಾಜ್ಯೈಯನ ಕುಮಾರನ ಜಾತಕವು ಸರ್ವೋತ್ತಮವಾಗಿದೆ. ಅದರಲ್ಲಿ ಕೇಂದ್ರಾಧಿಪತಿಗೆ ತ್ರಿಕೋಣಾಧಿಪತಿಯ ಸಂಬಂಧವುಂಟಾಗಿದೆ ; ಇತರ
15 ರಾದ ತೃತೀಯ, ಷಷ್ಠ, ಏಕಾದಶ, ಅಷ್ಟಮಾಧಿಪತಿಗಳ ಸಂಬಂಧವಿಲ್ಲ.—ಶ್ಲೋ|| ಕೇಂದ್ರತ್ರಿಕೋಣಪತಯಸ್ಸಂಬಂಧೇನಪರಸ್ಪರಂ | ಇತರೈರಪ್ರಸಕ್ತಾಶ್ಚೇದ್ವಿಶೇಷಶುಭದಾಯಕಾಃ||—ಎಂಬ ಶಾಸ್ತ್ರಪ್ರಕಾರವಾಗಿ ಆತನು ವಿಶೇಷ ಅದೃಷ್ಟವಂತನು. ಮಿಕ್ಕ ಚಿಲ್ಲರೆ ಚೇಷ್ಟೆಗಳಿದ್ದರೇನು ? ರೂಪದಿಂದೇನು ? ಇನ್ನು ನಾಲ್ಕು ವರುಷಗಳು ಹೋದ
20 ಮೇಲೆ ಎಷ್ಟು ಬುದ್ಧಿವಂತನಾಗುವನೋ ಯಾರು ಬಲ್ಲರು ? ನನ್ನ ಮಾತನ್ನು ಕೇಳಿ ಹುಡುಗಿಯನ್ನು ಆತನಿಗೆ ಕೊಡಿರಿ. "

ರಾಜಶೇಖರ—" ನಾನು ಬಾಪಿರಾಜಯ್ಯನ ಮಗನಿಗೆ ಮಗಳನ್ನು ಕೊಡೆನು. ನನ್ನ ತಂಗಿ ಸಾಯುವಾಗ ತನ್ನ ಮಗನಿಗೆ ಸೀತೆಯನ್ನು ಕೊಡುವಂತೆ ನನ್ನಿಂದ ಕೈಮೇಲೆ ಕೈಹಾಕಿಸಿಕೊಂಡಿದಾಳೆ.
25 ದಾಮೋದರಯ್ಯನು ಸೀತೆಯನ್ನು ಕೊಟ್ಟು ಶಂಕರಯ್ಯನನ್ನು ನಿಮ್ಮ ಬಳಿಯಲ್ಲೇ ಇಟ್ಟುಕೊಳ್ಳಿರಿ ಎಂದು ನಿತ್ಯವೂ ಕೇಳಿಕೊಳ್ಳುತಿದಾನೆ. ಈಗ ನಾನು ಮಗಳನ್ನು ಮತ್ತೊಬ್ಬನಿಗೆ ಕೊಟ್ಟಲ್ಲಿ ತಂಗಿಯು ಸತ್ತು

ಹೋದುದರಿಂದ ಹಾಗೆ ಮಾಡಿದನೆಂದು ಎಂದಿಗೂ ಹೀನಗಳೆಯುತ್ತಿರುವನು. ಅದಲ್ಲದೆ ನಮ್ಮ ಶಂಕರಯ್ಯನು ಬಹುಬುದ್ಧಿವಂತನು, ಸ್ಫುರದ್ರೂಪಿ, ವಿದ್ಯಾವಿನಯಸಂಪನ್ನನು; ಮಗಳನ್ನು ಆತನಿಗೇ ಕೊಡುವೆನು; ಜಾತಕವನ್ನು ನೀವು ಮತ್ತೊಂದುಸಾರಿ ಶ್ರದ್ಧೆಯಿಂದ ನೋಡಬೇಕು."

ಆಗ ಸಿದ್ಧಾಂತಿಯು ತಾನು ಮತ್ತೊಂದು ವಿಧವಾಗಿ ಹೇಳಿದರೆ ಸರಿಬೀಳದೆಂದು ತಿಳಿದುಕೊಂಡು ಕೊಂಚಹೊತ್ತು ಆಕಾಶದಕಡೆ ನೋಡಿ ಅನುಮಾನಿಸಿ, 'ಸೀತೆಯು ಜನನವು ಕೃತ್ತಿಕಾನಕ್ಷತ್ರದ ಯಾವ ಪಾದ?' ಎಂದು ಕೇಳಿದನು.

ರಾಜಶೇಖರ—"ದ್ವಿತೀಯ ಪಾದ."

ಸಿದ್ಧಾಂತಿ—"ಶಂಕರಯ್ಯನದು ಪ್ರಥಮಪಾದ. ಅಹುದು, ಅನುಕೂಲವಾಗಿಯೇ ಇದೆ—ಶ್ಲೋಕ ॥ ಏಕರ್ಕ್ಷೇಚೈಕಪಾದೇತುವಿವಾಹಃ ಪ್ರಾಣಿಹಾನಿದಃ । ದಂಪತ್ಯೋರೇಕನಕ್ಷತ್ರೇ ಭಿನ್ನಪಾದೇಶುಭಾವಹಃ ॥—ಎಂಬ ಶಾಸ್ತ್ರರೀತ್ಯಾ ದೋಷವಿರದಿರುವುದು ಮಾತ್ರವಲ್ಲದೆ ಶುಭಾವಹವಾಗಿ ಕೂಡ ಇರುವುದು. ತಪ್ಪದೆ ಸೀತೆಯನ್ನು ಕೊಟ್ಟು ವಿವಾಹಮಾಡಿರಿ."

ರಾಜಶೇಖರ—"ಈಸಂವತ್ಸರದಲ್ಲಿ ವಿವಾಹಕ್ಕನುಕೂಲವಾದ ಮುಹೂರ್ತವು ಯಾವಾಗ ಇದೆ?"

ಸಿದ್ಧಾಂತಿ—"'ಶ್ಲೋ॥ ಮಾಘಫಾಲ್ಗುನವೈಶಾಖಜ್ಯೇಷ್ಠಮಾಸಾಶ್ಶುಭಪ್ರದಾಃ,' ಎಂದಿರುವುದರಿಂದ ಮಾಘಮಾಸವನುಕೂಲವಾಗಿದೆ. ಬಹುಳ ಪಂಚಮೀ ಮಂಗಳವಾರದ ದಿವಸ ರವಿ ಕುಂಭಲಗ್ನದಲ್ಲಿರುವನು, ಆಮುಹೂರ್ತ ದಿವ್ಯವಾದುದು—'ಶ್ಲೋ॥ ಅಜಗೋಯುಗಕುಂಭಾಳಿ ಮೃಗರಾಶಿಗತೇರವೌ । ಮುಖ್ಯಃಕರ್ಮಗೃಹಸ್ಥಸ್ಯರಾಶಿಕೇನಕದಾಚನ ॥'—ಎಂದು ಪ್ರಮಾಣವಚನವು."

ರಾಜಶೇಖರ—"ನಿಮ್ಮ ಮಗಳಿಗೆ ಕಾಯಿಲೆಯು ಗುಣವಾಗಿದೆಯೇ?"

ಸಿದ್ಧಾನ್ತಿ—"ತಮ್ಮ ಕಟಾಕ್ಷದಿಂದ ಗುಣವಾಗಿಯೇ ಇದೆ. ಆ ದಿವಸ ತಾವು ಹೇಳಿದ ಬೈರಾಗಿ ಬಹಳ ಸಮರ್ಥನು. ಆತನು ನಮ್ಮ ಮನೆಯಲ್ಲಿ ಗ್ರಹವನ್ನು ನಿಮಿಷದಲ್ಲಿ ಹೊರಕ್ಕೆ ಹೊರಡಿಸಿದನು. ಭೂತವೈದ್ಯರೆಲ್ಲರೂ ನಮ್ಮ ಹುಡುಗಿಗೆ ಹಿಡಿದ ಗ್ರಹವನ್ನು ಬಿಡಿಸುವು 5 ದಸಾಧ್ಯವೆಂದು ಬಿಟ್ಟುಬಿಟ್ಟರು. ಆತನು ಮೂರುದಿನಗಳು ಜಲವನ್ನಭಿಮಂತ್ರಿಸಿ ಕೊಟ್ಟು ಯಂತ್ರವನ್ನು ಕಟ್ಟಿದನು; ಅಂದಿನಿಂದ ಹುಡುಗಿ ಸುಖವಾಗಿದಾಳೆ."

ರಾಜಶೇಖರ—"ನನ್ನ ತಂಗಿ ಸುಬ್ಬಮ್ಮನಿಗೆ ದೇಹದಲ್ಲಿ ಅಸ್ವಸ್ಥವಾಗಿದೆ. ನಮ್ಮ ಗ್ರಾಮದಲ್ಲಿ ಯಾರೂ ಒಳ್ಳೆಯ ವೈದ್ಯರು ಕಾಣ 10 ಬರುವುದಿಲ್ಲ; ನನಗೇನುಮಾಡುವುದಕ್ಕೂ ತೋರದಿದೆ."

ರಾಘವಾಚಾರಿ—"ಬೈರಾಗಿಯಿಂದ ಔಷಧಕೊಡಿಸಬಾರದೇ? ನೀವು ಹಣಕೊಟ್ಟರೂ ಆತನು ತೆಗೆದುಕೊಳ್ಳನು. ಈವೂರಲ್ಲೆಷ್ಟು ಜನಕ್ಕೋ ಧರ್ಮಾರ್ಥವಾಗಿಯೇ ಔಷಧಗಳನ್ನು ಕೊಟ್ಟು ದೀರ್ಘವ್ಯಾಧಿಗಳನ್ನು ಕೂಡ ವಾಸಿಮಾಡಿದಾನೆ."

15 ರಾಜಶೇಖರ—"ಘಟ್ಟಿಗನಾದಲ್ಲಿ ನೀನಾತನನ್ನು ಒಂದುಸಾರಿ ಮಧ್ಯಾಹ್ನ ನಮ್ಮಮನೆಗೆ ಕರೆದುಕೊಂಡು ಬಂದು ಸುಬ್ಬಮ್ಮನನ್ನು ನೋಡಿಸುವೆಯಾ? ನಾಲ್ಕುದಿವಸದಿಂದ ಆಕೆಯ ಶರೀರದಲ್ಲಿ ಅಸ್ವಸ್ಥವಾಗಿರುವುದರಿಂದ ಅಡಿಗೆಗೆ ಬಹಳ ತೊಂದರೆಪಡುತ್ತಿದೇವೆ."

ರಾಘವಾಚಾರಿ—"ಅವಶ್ಯಕವಾಗಿ ಕರೆದುಕೊಂಡು ಬರುವೆನು. 20 ಆತನಿಗೇನೂ ಭೇಷಜಗಳಿಲ್ಲ, ಯಾರು ಕರೆದರೂ ಬರುವನು."

ಸಿದ್ಧಾನ್ತಿ—"ಆತನಲ್ಲಿ ಸ್ವರ್ಣಮುಖೀವಿದ್ಯೆಯಿರುವುದೆಂದುಹೇಳುವರು. ಗೋಸಾಯಿಗಳಲ್ಲಿ ಎಂಥೆಂಥ ಮಹಾನುಭಾವರೋ ಇರುವರು."

ರಾಘವಾಚಾರಿ—"ಆತನು ಪ್ರತಿದಿನವೂ ದುಡ್ಡುತೂಕ ತಾಮ್ರವನ್ನು ಕರಗಿಸಿ ಬಂಗಾರಮಾಡುವನಂತೆ! ಆತನಾಗಾಗ್ಗೆ ಬ್ರಾಹ್ಮಣ 25 ರಿಗೆ ದಾನಧರ್ಮಮಾಡುವನು. ಆವಿದ್ಯೆಯಿಲ್ಲದಿದ್ದರೆ ಆತನಿಗೆ ಧನವೆಲ್ಲಿಂದ ಬರುವುದು?"

ರಾಜಶೇಖರ—" ರಾಘವಾಚಾರೀ ! ದೇವರಿಗೆ ಅಧ್ಯಯನೋತ್ಸವಗಳು ಕ್ರಮವಾಗಿ ನಡೆಯುತ್ತಿವೆಯೋ ? "

ರಾಘವಾಚಾರಿ—" ತಮ್ಮನುಗ್ರಹವಿರುವಲ್ಲಿ ಉತ್ಸವಗಳಿಗೇನು ಲೋಪ ? ಹೋದ ಪುಷ್ಯಮಾಸದಲ್ಲಿ ಸಂಕ್ರಾಂತಿಯ ದಿವಸದ ಉತ್ಸವವು ಪ್ರತ್ಯೇಕವಾಗಿ ತಮ್ಮ ಹಣದಿಂದಲೇ ನಡೆಯಿತು. ನಿನ್ನೆಯೋ ಮೊನ್ನೆಯೋ ಎಂಬಂತೆ ಕಾಣಬರುತಿದೆ, ಆಗಲೇ ಸಂವತ್ಸರವಾಯಿತು. ನಾಳೆಯೇ ಸಂಕ್ರಾಂತಿ; ಈಸಂಗತಿಯನ್ನು ತಮ್ಮಲ್ಲಿ ಅರಿಕೆ ಮಾಡಿಕೊಳ್ಳಬೇಕೆಂದು ಬಂದು, ಸುಬ್ಬಮ್ಮನವರಿಗೆ ಕಾಯಿಲೆಯಾಗಿರುವುದರಿಂದ ಸಮಯವಲ್ಲವೆಂದು ಸುಮ್ಮನಿದೇನೆ. "

ರಾಜಶೇಖರ—" ಹೋದ ಸಂವತ್ಸರ ನೂರೈವತ್ತುರೂಪಾಯಿಗಳನ್ನು ಕೊಟ್ಟೆನು. ಈಸಂವತ್ಸರ ನಮ್ಮ ಮನೆಯಲ್ಲಿ ವಿವಾಹಗಳು ಆಸನ್ನವಾಗಿವೆಯಾದುದರಿಂದ ನೂರುರೂಪಾಯಿಗಳನ್ನು ಮಾತ್ರ ಕೊಡುವೆನು. ಹೇಗಾದರೂ ಅದರಲ್ಲೇ ಸರಿಮಾಡಿಕೊಳ್ಳಬೇಕು. "

ರಾಘವಾಚಾರಿ—" ಚಿತ್ತ ! ಅದಕ್ಕೇನು ? ಹಾಗೆಯೇ ಮಾಡುವೆನು. "

ರಾಜಶೇಖರ—" ರಾಘವಾಚಾರೀ ! ಬೈರಾಗಿಯನ್ನು ಅಗತ್ಯವಾಗಿ ಈ ದಿವಸವೇ ನಮ್ಮ ಮನೆಗೆ ಕರೆದುಕೊಂಡು ಬಂದು ನೀನು ಮತ್ತೊಂದು ಕೆಲಸ ಮಾಡಬೇಕೈಯ್ಯಾ ! ಹೊತ್ತೇರುತಿದೆ, ಜಾಗ್ರತೆಯಾಗಿ ಹೊರಡು. ಸಿದ್ಧಾಂತಿಯವರೇ ! ನಿಮಗೆ ಸಂದೇಹವಾಗಿರುವ ಪಕ್ಷಕ್ಕೆ ಶಂಕರಯ್ಯನ ಜಾತಕವನ್ನು ಮತ್ತೊಂದುಸಾರಿ ನೋಡಿ; ಯಾರೊಡನೆಯಾದರೂ ಆಲೋಚಿಸಬೇಕಾಗಿದ್ದರೆ, ಲಚ್ಚಯ್ಯಶಾಸ್ತ್ರಿಗಳಿಗೆ ಆಜಾತಕವನ್ನು ತೋರಿಸಬಹುದು. "

ಸಿದ್ಧಾಂತಿ—" ಚಿತ್ತ. ನನಗಂಥ ಸಂದೇಹವಿಲ್ಲ. "

ರಾಜಶೇಖರ—" ಹಾಗಿದ್ದಲ್ಲಿ ಈಗ ಮನೆಗೆ ಹೋಗಿ ತರುವಾಯ ದರ್ಶನಕೊಡಿ " ಎಂದು ಹೇಳಿ ಕಳುಹಿಸಿದ ತರುವಾಯ ಸಭೆಯವರೆಲ್ಲರೂ ತಮ್ಮತಮ್ಮ ಮನೆಗಳಿಗೆ ಹೋದರು. ರಾಜಶೇಖರನು

ಭೋಜನಮಾಡಿ ಕೈತೊಳೆದುಕೊಳ್ಳುವ ಹೊತ್ತಿಗೆ ರಾಘವಾಚಾರ್ಯನು ಆಬೈರಾಗಿಯನ್ನು ಸಂಗಡ ಕರೆದುಕೊಂಡು ಬಂದು ಮನೆಯೊಳಕ್ಕೆ ಪ್ರವೇಶಿಸಿದನು. ಆಗಿನಿಂದ ನಿತ್ಯವೂ ರಾಜಶೇಖರನು ಆಬೈರಾಗಿಗೆ ಸಕಲೋಪಚಾರಗಳನ್ನು ಮಾಡುತ್ತ ಭಕ್ತಿಯಿಂದ ಅನುಸರಿಸುತಿದ್ದನು. ಸುಬ್ಬಮ್ಮನಿಗೆ ವ್ಯಾಧಿಯು ಕೂಡಲೆ ವಾಸಿಯಾದರೂ ಸ್ವರ್ಣಮಾಡುವ ವಿದ್ಯೆಯನ್ನು ಕಲಿಯಬೇಕೆಂಬಾಸಕ್ತಿಯಿಂದ ರಾಜಶೇಖರನಾತನನ್ನು ಬಿಟ್ಟುಬಿಡದೆ, ಮನೆಯಲ್ಲೇ ಇಟ್ಟುಕೊಂಡು ನಿತ್ಯವೂ ಹಾಲು ಸಕ್ಕರೆಗಳನ್ನು ಹೊತ್ತಿಗೆ ಸರಿಯಾಗಿ ಸಮರ್ಪಿಸುತ್ತ, ಭಕ್ತಿಯಿಂದ ಅನೇಕೋಪಚಾರಗಳನ್ನು ಮಾಡುತ್ತ, ಆತನ ಅನುಗ್ರಹಸಂಪಾದನೆಗೆ ತಕ್ಕ ಪ್ರಯತ್ನವನ್ನು ಮಾಡುತಿದ್ದನು. ಈಪ್ರಕಾರವಾಗಿ ಕೆಲವು ದಿನಗಳು ಕಳೆದಮೇಲೆ ಜನಾರ್ದನಸ್ವಾಮಿಯ ಕಲ್ಯಾಣೋತ್ಸವವು ಸಮೀಪಿಸಿತು. ಆವುತ್ಸವವನ್ನು ನೋಡುವುದಕ್ಕೋಸ್ಕರ ಸುತ್ತುಮುತ್ತು ಗ್ರಾಮಗಳಿಂದ ಸಾವಿರಾರು ಜನಗಳು ಬಂದು ಪ್ರತಿ ಮನೆಯಲ್ಲೂ ಕಿಕ್ಕಿರಿಸುವಂತೆ ಇಳಿದಿದ್ದರು.

ಮಾಘಶುದ್ಧ ಏಕಾದಶಿಯ ದಿವಸ ರಥೋತ್ಸವಕ್ಕೆ ಬೇಕಾದ ಪ್ರಯತ್ನಗಳೆಲ್ಲವೂ ನಡೆಯುತ್ತಿದ್ದುವು. ನಾಲ್ಕುದಿನಗಳಿಂದ ರಥವೆಲ್ಲವನ್ನೂ ಅಲಂಕರಿಸಿ ಆದರುದ್ದಕ್ಕೂ ಬಣ್ಣಬಣ್ಣದ ಬಟ್ಟೆಗಳನ್ನೂ ಚಿತ್ರವರ್ಣಗಳ ಕಾಗದಗಳನ್ನೂ ಹಚ್ಚಿ, ಬಿದಿರುಜಳವೆಗಳ ಕೊನೆಗೆ ಹನುಮದ್ವಿಗ್ರಹವೂ ಗರುಡವಿಗ್ರಹವೂ ಉಳ್ಳ ಧ್ವಜಪಟಗಳನ್ನು ಕಟ್ಟಿ ರಥಕ್ಕೆ ಸಿಕ್ಕಿದರು. ದೇವರನ್ನು ಕುಳ್ಳಿರಿಸುವ ಅಂತಸ್ತಿನಲ್ಲಿ ಗೊನೆಗಳೊಡನಿರುವ ಕದಳಿಕಾಸ್ತಂಭಗಳನ್ನು ನಿಲ್ಲಿಸಿ, ಅದಕ್ಕೆ ಮಾವಿನ ಗೊಂಚಲುಗಳಿಂದಲೂ ವಿವಿಧಪುಷ್ಪಗಳಿಂದಲೂ ತೋರಣಗಳನ್ನು ಕಟ್ಟಿದರು. ಅಬಾಳೆಯ ಕಂಬಗಳಿಗೆ ನಡುವೆ ಬಿಳಿಯ ಬಣ್ಣದ ಕುದುರೆಗಳೆರಡು ರಥವನ್ನೆಳೆಯುತಿರುವಂತೆ ಮುಂಗಾಲ್ಗಳನ್ನು ಮೇಲಕ್ಕೆತ್ತಿಕೊಂಡು ಬೀದಿಯಕಡೆ ನೋಡುತಿದ್ದುವು. ಆ ರಥಕ್ಕೆ ಹತ್ತುಹೆಜ್ಜೆಯ ದೂರದಲ್ಲಿ ಬಿದಿರಿನಿಂದ ಹೆಣೆದು ಮೇಲೆ ಬಟ್ಟೆಮುಚ್ಚಲ್ಪಟ್ಟ ವಿಕೃತಾಕಾರದಿಂದಿದ್ದ ಆಂಜನೇಯವಿಗ್ರಹದಲ್ಲೂ

ಗರುಡವಿಗ್ರಹದಲ್ಲೂ ಮನುಷ್ಯರು ತೂರಿಕೊಂಡು, ನೋಡಬಂದ ಹಳ್ಳಿಯವರನ್ನೂ ಹುಡುಗರನ್ನೂ ಹೆದರಿಸುವುದಕ್ಕೋಸ್ಕರ ಎಗರಿ ಎಗರಿ ಬೀಳುತ್ತ ಅರಗಿನ ತಲೆಕಾಯಿಗಳನ್ನು ತಿರುಗಿಸುತ್ತಿದ್ದರು. ಆಗ ಪೂಜಾರಿಗಳು ಪಲ್ಲಕಿಯಲ್ಲಿ ಉತ್ಸವವಿಗ್ರಹಗಳನ್ನು ಕುಳ್ಳಿರಿಸಿ ಕೊಂಡು ವಾದ್ಯಗಳೊಡನೆ ಬೆಟ್ಟವನ್ನಿಳಿದು ಬಂದು ರಥಕ್ಕೆ ಮೂರು ಪ್ರದಕ್ಷಿಣೆಗಳನ್ನು ಮಾಡಿಸಿ ದೇವರನ್ನದರಲ್ಲಿ ಬಿಜಯಮಾಡಿಸಿದರು. ಹತ್ತಿರಿದ್ದವರೆಲ್ಲರೂ ಕೆಳಗಿನಿಂದ ದೇವರನ್ನು ಬಾಳೆಯ ಹಣ್ಣಿನಿಂದ ಹೊಡೆಯುತ್ತಿರಲು, ರಥದಮೇಲೆ ಕುಳಿತಿದ್ದ ಅರ್ಚಕರೂ ತದಿತರರೂ ಕೈಗಳಿಂದ ದೆಬ್ಬೆಗಳು ತಗಲದಂತೆ ಕಾಯ್ದುಕೊಳ್ಳುತ್ತ, ನಡುನಡುವೆ ಕೈಗಂಟೆಗಳನ್ನು ಬಾರಿಸುತ್ತ, 'ಗೋವಿಂದಾ' ಎಂದು ಕೂಗುತ್ತಿದ್ದರು. ಆಕೂಗುಗಳಿಂದ ರಥಕ್ಕೆ ಕಟ್ಟಿದ್ದ ಹೊರಜೆಗಳನ್ನು ನೂರಾರುಮಂದಿ ಹಿಡಿದುಕೊಂಡು ಮನೆಗಳ ಮಾಳಿಗೆಗಳೂ ಬೀದಿಯ ಜಗಲಿಗಳೂ ಕುಸಿಯುವಂತೆ ರಥವನ್ನೆಳೆಯುತ್ತಿದ್ದರು. ಅಷ್ಟರಲ್ಲಿ ಸೂಳೆಯ ಮೇಳವೊಂದು ರಥದಮುಂದೆ ದೂರವಾಗಿ ನಿಲ್ಲಲು ಮದ್ದಳೆಯಮೇಲೆ ಕೈಹಾಕಿಕೊಂಡು ಒಬ್ಬಳು ಆಡಸಾಗಿದಳು. ಮದ್ದಳೆಯ ಶಬ್ದ ಕೇಳಿ ಬಂದ ತತ್ಕ್ಷಣವೇ ದೇವರ ಹತ್ತಿರಿದ್ದ ದೊಡ್ಡಮನುಷ್ಯರೆಲ್ಲರೂ ಜನಗಳನ್ನು ತಳ್ಳಿಕೊಂಡು ಬಂದು ಆಟಗಾತಿಯರ ಮುಂದೆ ಮೊದಲಿದ್ದವರನ್ನು ಹಿಂದಕ್ಕೆ ಕಳುಹಿಸಿ ತಾವು ದೊಡ್ಡವರಾಗಿದ್ದು ಉತ್ಸವದಲ್ಲಿ ಗಾನವಿನೋದಕ್ಕೆ ಕೊರತೆ ಬಾರದಂತೆ ಸಮರ್ಥಿಸುತ್ತಿದ್ದರು.

ಆಗ ರುಕ್ಮಿಣಿ ಸಮಸ್ತಾಭರಣಭೂಷಿತಳಾಗಿ, ಉಮ್ಮತ್ತಿಯ ಹೂವಿನಂತೆ ಅಂದವಾಗಿ ಬಳುಕುತಿರುವ ನೆರಿಗೆಗಳು ಮುಮ್ಮಡಿಗಳ ಮೇಲೆ ಪಸರಿಸೆ, ಎಡಬುಜದ ಮೇಲಿನಿಂದ ಬಂದು ತುರಾಯಿಗಂಬಿಯ ಸರಿಗೆಯಂಚಿನ ಮೇಲ್ಸೆರಗು ಬೆನ್ನಿನಮೇಲೆ ಜಾರಿರೆ, ಉಟ್ಟಿದ್ದ ನವಿಲ್ಗಣ್ಣಿನ ಕರಿಯ ಸೀರೆ ಆಕೆಯ ಸೌಂದರ್ಯಕ್ಕೊಂದು ವಿಚಿತ್ರವಾದ ಸೊಬಗನ್ನುಂಟುಮಾಡೆ, ಕಾಲಂದುಗೆಗಳೂ ಪಾಂಜೇಬುಗಳೂ ಘಲ್ ಘಲ್ಲೆಂದು ಶ್ರಾವ್ಯನಾದವಂ ಮಾಡೆ, ಬಲಗೈ ವಿನಾ ಮಿಕ್ಕ ಭಾಗವೆಲ್ಲ ಸೆರಗಿನಲ್ಲಡಗಿಕೊಂಡು ಕಾಣದಂತಿರುವ ಅರಿಸಿನಬಣ್ಣದ ಗುತ್ತನಾದ

ರೇಷ್ಮೆಯ ಕುಪ್ಪಸವು ಎಳವಿಸಿಲಲ್ಲಿ ದ್ವಿಗುಣವಾಗಿ ಪ್ರಕಾಶಿಸೆ,
ತುರುಬಿನಲ್ಲಿರುವ ಹೂಗಳ ವಾಸನೆಯು ದಿಕ್ಕುಗಳಿಗೆ ಪರಿಮಳವಂ
ಹರಡುತ್ತ ಗಂಧವಹನನ್ನು ಸಾರ್ಥಕನಾಮನನ್ನಾಗಿಮಾಡೆ, ನಡೆದು
ಬಂದು ಬೀದಿಯಲ್ಲೊಂದು ಜಗಲಿಯಹತ್ತಿರ ನಿಂತುಕೊಂಡು ರಥದಕಡೆ
5 ನೋಡುತ್ತಿದ್ದಳು. ಈದೇಶದಲ್ಲಿ ಸಾಧಾರಣವಾಗಿ ಸ್ತ್ರೀಯರು ತಮ್ಮ
ಭರ್ತರು ಊರಲ್ಲಿಲ್ಲದಾಗ ಭಾರಿಸೀರೆಗಳನ್ನುಟ್ಟುಕೊಂಡಲಂಕರಿಸಿ
ಕೊಳ್ಳುವುದು ದೂಷ್ಯವೆಂದೇ ಎಣಿಸುವರಾದರೂ ಇತರರ ಮನೆ
ಗಳಲ್ಲಿ ನಡೆಯುವ ಶುಭಕಾರ್ಯಗಳಿಗೆ ಹೋಗುವಾಗಲೂ ಊರಲ್ಲಿ ಬೆಳ
ಯುವ ದೇವರ ಕಲ್ಯಾಣೋತ್ಸವವನ್ನೂ ಗ್ರಾಮದೇವತೆಗಳ ಜಾತ್ರೆ
10 ಗಳನ್ನೂ ನೋಡಹೋಗುವಾಗಲೂ ಎರವುತಂದುಕೊಂಡಾದರೂ
ಒಳ್ಳೆಯ ಬಟ್ಟೆಗಳನ್ನೂ ಒಳ್ಳೆಯ ಒಡವೆಗಳನ್ನೂ ಧರಿಸಿಕೊಳ್ಳದೆ
ಬಿಡರು. ಅಂದಿನ ಆಕೆಯ ಸೌಂದರ್ಯವನ್ನೇನೆಂದು ಹೇಳಲಿ! ಅಗಲ
ವಾಗಿಯೂ ಉದ್ದವಾಗಿಯೂ ಇರುವ ಕಣ್ಣುಗಳಿಗೆ ಕಪ್ಪಿನ ರೇಖೆಗ
ಳೊಂದು ಸೊಗಸನ್ನು ತುಂಬೆ, ಮುಗುಳ್ನಗೆಯ ನೆವದಿಂದ ಅರ್ಧ
15 ಚಂದ್ರನನ್ನು ಪರಿಹಸಿಸುವ ಹಣೆಯಲ್ಲಿ ಬಾಲಚಂದ್ರನಾಕೃತಿಯಾಗಿ
ರುವ ಕುಂಕುಮದ ಬೊಟ್ಟು ಪ್ರಕಾಶಿಸೆ, ಶೃಂಗಾರರಸವುಕ್ಕುವ
ಆಮುದ್ದುಮುಖದಂದವನ್ನು ಕಣ್ಣಿನಿಂದ ಬರ ಹರಿಯುವಂತೆ ನೋಡಿ
ತೀರಬೇಕಲ್ಲದೆ ಹೇಳತೀರದು. ರಥವು ಆಕೆಯ ದೃಷ್ಟಿಪಥವನ್ನು ದಾಟಿ
ಹೋದಕೂಡಲೆ ದ್ವಾದಶೋರ್ಧ್ವಪುಂಡ್ರಗಳನ್ನು ದಿಟ್ಟವಾಗಿ ಧರಿಸಿ
20 ದಾಸೈಯಗಳು ಕಬ್ಬಿಣದ ದೀಪಸ್ತಂಭಗಳಲ್ಲಿ ದೀಪಗಳನ್ನು ಬೆಳಗಿಸಿ
ಕೊಂಡು ನಡುವಿಗೆ ರೇಷ್ಮೆಯ ವಸ್ತ್ರಗಳನ್ನು ಬಿಗಿದುಕೊಂಡು
ಬಂದು ಕೈಯಲ್ಲಿ ನವಿಲಬಿಂಛವನ್ನಾಡಿಸುತ್ತ ಮತ್ತೊಂದುಕೈಯಲ್ಲಿನ
ಬಟ್ಟೆಯ ಸುತ್ತನ್ನು ಎಣ್ಣೆಯಲ್ಲಿ ನೆನಸಿ ಬೆಳಗಿಸಿ ಸೆಕೆಸೋಕದಂತೆ
ಯುಕ್ತಿಯಿಂದ ದೇಹದ ತುಂಬ ಹತ್ತಿಸಿಕೊಳ್ಳುತ್ತ, ಜನರು ಕೊಡುವ
25 ಕಾಸುಗಳನ್ನು ದೀಪಸ್ತಂಭಗಳ ಹಣತೆಗಳಲ್ಲಿ ಹಾಕುತ್ತ ನಡೆದರು.
ಆಸಂದಣಿಯಡಗಿದಕೂಡಲೆ ರುಕ್ಮಿಣಿಯೂ ತಾಯೂ ಇನ್ನೂ ಕೆಲಬರೂ
ಕೂಡ ಹೊರಟು, ಉತ್ಸವದ ನಿಮಿತ್ತವಾಗಿ ನೆರೆಯೂರುಗಳಿಂದ ಬಂದು

ಗೂಡಾರಗಳಲ್ಲಿಟ್ಟಿದ್ದ ಕಂಚಿನಂಗಡಿಗಳನ್ನೂ ಹಣ್ಣುಹಂಪಲುಗಳಂಗಡಿ
ಗಳನ್ನೂ ದಾಟಿ, ಸೋಪಾನಗಳುದ್ದಕ್ಕೂ ಇರ್ಕಡೆಗಳಲ್ಲೂ ಬಟ್ಟೆ
ಗಳನ್ನು ಹಾಸಿಕೊಂಡು ಕೂಗುತ್ತ ಕುಳಿತಿದ್ದ ವಿಕಲಾಂಗರಿಗೆ ಕಡಲೆ
ಪುರಿಯನ್ನೂ ಕವಡೆಗಳನ್ನೂ ಹಾಕುತ್ತ, ಕಾಶಿಯ ಕಾವಡಿಗಳನ್ನು
ಮುಂದಿಟ್ಟುಕೊಂಡು ಪುಣ್ಯಾತ್ಮರನ್ನೂ ಪಾಪಾತ್ಮರನ್ನೂ ಸ್ವರ್ಗವನ್ನೂ
ನರಕವನ್ನೂ ತೋರಿಸುವೆವೆಂದು ಪಟಗಳನ್ನು ಕೈಯಲ್ಲಿ ಹಿಡಿದು
ಕೊಂಡು, ಬರುವವರನ್ನೂ ಹೋಗುವವರನ್ನೂ ಅಡ್ಡಹಾಕುತಿರುವ
ಕಪಟಯಾತ್ರಿಕರಿಂದ ತಪ್ಪಿಸಿಕೊಂಡು, ಬೆಟ್ಟಹತ್ತಿ ದೇವತಾಸಂದರ್ಶ
ನಾರ್ಥವಾಗಿ ಹೊರಟರು. ಬಲಿಷ್ಠರಾದ ಕೆಲವರು ದೇವರಿಗೆ ಹಣ್ಣು
ಕಾಯಿಗಳನ್ನು ಕೊಡಬೇಕೆಂಬಪೇಕ್ಷೆಯಿಂದ ಮಳಲಿರಚಿದರೆ ನೆಲಕ್ಕೆ
ಬೀಳದಂತಿರುವ ಗುಂಪಿನಲ್ಲಿ ನುಗ್ಗಿ ಸಂದಡಿಯಲ್ಲಿ ಸಿಕ್ಕಿಕೊಂಡು,
‘ ದೇವತಾದರ್ಶನ ಹಾಗಿರಲಿ, ಗುಂಪಿನಿಂದಿತ್ತ ಬಂದರೆ ಸಾಕು ’ ಎಂದು
ಅರ್ಧದಾರಿಯಿಂದ ಹಿಂತಿರುಗಿ ಹೊರಕ್ಕೆ ಬಂದು ಸಂತೋಷಪಡುತಿದ್ದರು.
ಅವರಿಗಿಂತ ಬಲಿಷ್ಠರಾದವರು ಗರ್ಭಗುಡಿಯವರೆಗೂ ಹೋಗಿ ಹಣ್ಣು
ಕಾಯಿಗಳನ್ನೂ ದುಡ್ಡನ್ನೂ ಪೂಜಾರಿಯ ಕೈಯಲ್ಲಿಟ್ಟು ಇತ್ತಕಡೆ
ಬಂದು ಬೀಳುತಿದ್ದರು. ಅರ್ಚಕರೂ ಒಬ್ಬರಾದಮೇಲೊಬ್ಬರು
ಹೊರಕ್ಕೆ ಬಂದು ಬೆವರಿನಿಂದ ನೆನೆದ ಬಟ್ಟೆಗಳನ್ನು ಹಿಂಡಿಕೊಂಡು
ಹೊರಗಿನ ಗಾಳಿಯಲ್ಲಿ ಕೊಂಚಹೊತ್ತು ಹಾಯಾಗಿದ್ದು ಪುನಃ ಗರ್ಭ
ಗುಡಿಯೊಳಕ್ಕೆ ಪ್ರವೇಶಿಸಿ, ಆಸೆಕೆಯಲ್ಲಿ ಬಾಧೆಪಡುತಿದ್ದರು. ಈಪ್ರ
ಕಾರವಾಗಿ ಬಂದ ಅರ್ಚಕರಲ್ಲೊಬ್ಬನು ಮಾಣಿಕ್ಯಾಂಬೆಯನ್ನು ನೋಡಿ
ಆಕೆಯ ಕೈಯಲ್ಲಿದ್ದ ಹಣ್ಣುಕಾಯಿಗಳನ್ನು ತೆಗೆದುಕೊಂಡು ಒಳಕ್ಕೆ
ಹೋಗಿ ಸ್ವಾಮಿಗೆ ನಿವೇದನಮಾಡಿ ಅವುಗಳಲ್ಲಿ ಕೆಲವನ್ನೂ ತುಳಸೀದಳ
ಗಳನ್ನೂ ಹಿಂದಕ್ಕೆ ತಂದುಕೊಟ್ಟು ಎಲ್ಲರ ತಲೆಯಮೇಲೂ ಶಠಕೋಪ
ವನ್ನಿಟ್ಟನು. ತರುವಾಯ ಮಾಣಿಕ್ಯಾಂಬೆ ಹಿಂತಿರುಗಿ ಆಲಯದ್ವಾರವನ್ನು
ದಾಟುತಿದ್ದಳು. ರುಕ್ಮಿಣಿ ಆಕೆಯ ಸೆರಗನ್ನು ಹಿಡಿದುಕೊಂಡು ಹಿಂದೆ
ನಿಂತಿದ್ದಳು. ಒಂದು ಪಕ್ಕದಲ್ಲಿ ಸೀತೆಯೂ ಮತ್ತೊಂದು ಪಕ್ಕದಲ್ಲಿ
ಒಬ್ಬ ಮುತ್ತೈದೆಯೂ ನಿಂತಿದ್ದರು. ಆಸಮಯದಲ್ಲಿ ಯಾವನೋ

ಒಬ್ಬನು ಹಿಂದಿನಿಂದ ರುಕ್ಮಿಣಿಯ ಕತ್ತಿಗೆ ಕೈಹಾಕಿ ಕಾಸಿನ ಸರವನ್ನು ಪುಟಕ್ಕೆಂದು ಕಿತ್ತನು. ರುಕ್ಮಿಣಿ ಹಿಂತಿರುಗಿ ನೋಡುವಾಗ್ಗೆ ಕೈಯೂ ಕಾಸಿನಸರವೂ ಕೂಡ ಅದೃಶ್ಯವಾದುವು. ರುಕ್ಮಿಣಿಯ ಕೂಗಿನಿಂದ ಹತ್ತುಮಂದಿ ಬಂದು ಕಳ್ಳನನ್ನು ಹಿಡಿಯುವುದಕ್ಕೆ ಪ್ರಯತ್ನಮಾಡು
5 ತಿರುವಾಗ ಆಕಳ್ಳನೂ ಕೂಡ ಅವರಲ್ಲೇ ಸೇರಿಕೊಂಡು ತಾನೂ ಕಳ್ಳನನ್ನೇ ಹುಡುಕುತಿದ್ದನು. ಆಗ ರುಕ್ಮಿಣಿ ಮೊದಲಾದವರು ಪ್ರದೋಷಸಮಯದಲ್ಲಿ ಒಡವೆಹೋದುದಕ್ಕಾಗಿ ಮತ್ತಷ್ಟು ವಿಚಾರ ಪಡುತ್ತ ಮನೆಗೆ ಹೋದರು.

---

## ಆರನೆಯ ಪ್ರಕರಣ.

ಒಡವೆಹೋದುದಕ್ಕೆ ಮಂತ್ರಜ್ಞರು ಮಾಡಿದ ತಂತು—ರುಕ್ಮಿಣಿಯಗಂಡನು ಹೋದವಾರ್ತೆಯನ್ನೊಬ್ಬನು ಹೇಳುವುದು—ರುಕ್ಮಿಣಿಗೆ ರೋಗಬರುವುದು—ಶರಣು ಕೇಳುವುದು—ಗಂಡನು ಹಿಡಿಯುವುದು—ಭೂತವೈದ್ಯವು—ಸುವರ್ಣ ವಿದ್ಯೆ—ಬೈರಾಗಿ ಒಡವೆಯೊಂದಿಗೆ ಅದೃಶ್ಯನಾಗುವುದು.

ಮಾರನೆಯದಿನ ಪ್ರಾತಃಕಾಲದಲ್ಲಿ ರಾಜಶೇಖರನು ದಂತಧಾವನ
10 ಮಾಡಿಕೊಳ್ಳುತ ಬೀದಿಯ ಜಗಲಿಯಮೇಲೆ ಕುಳಿತುಕೊಂಡಿದ್ದಾಗ ಸಿದ್ಧಾಂತಿಯು ತನ್ನ ಸಂಗಡ ಮತ್ತೊಬ್ಬಬ್ರಾಹ್ಮಣನನ್ನು ಕರೆದು ಕೊಂಡು ಬಂದು ಜಗಲಿಯಮೇಲೊಂದುಕಡೆ ಹುಸ್ಸೆಂದು ಕಾಲು ಚಾಚಿಕೊಂಡು ಕುಳಿತುಕೊಂಡನು. ಕೈಯಲ್ಲಿ ಬೆಳ್ಳಿಯಕಟ್ಟನ್ನು ಹಾಕಿದ ಬೆತ್ತವನ್ನು ಹಿಡಿದುಕೊಂಡು, ತಲೆಯನ್ನೂ ಗಡ್ಡವನ್ನೂ
15 ಉಗುರುಗಳನ್ನೂ ಬೆಳಸಿಕೊಂಡು, ಕಣ್ಣುಹುಬ್ಬುಗಳ ನಡುವೆ ದೊಡ್ಡ ಕುಂಕುಮದ ಬೊಟ್ಟನ್ನಿಟ್ಟುಕೊಂಡು ಗಂಭೀರವಾಗಿ ಕುಳಿತುಕೊಂಡಿದ್ದ ಆವಿಗ್ರಹವನ್ನು ನಖಶಿಖಾಪರ್ಯಂತವೂ ದೃಷ್ಟಿಸಿ ನೋಡಿ ಆತನಾರೆಂದು ರಾಜಶೇಖರನು ಸಿದ್ಧಾಂತಿಯನ್ನು ಕೇಳಿದನು. "ಇವರು ಮಹಾಮಂತ್ರ ವೇತ್ತರು; ಮಲೆಯಾಳದಲ್ಲಿ ಕೊಂಚಕಾಲವಿದ್ದು ಮಂತ್ರರಹಸ್ಯಗಳನ್ನಾ
20 ಮೂಲಾಗ್ರವಾಗಿ ಗ್ರಹಿಸಿದಾರೆ; ಇವರು ಕೃಷ್ಣಾತೀರದಿಂದ ಯಾತ್ರಾರ್ಥ ವಾಗಿ ಬಿಜಯಮಾಡಿದಾರೆ; ಇವರ ಹೆಸರು ಹರಿಶಾಸ್ತ್ರಿಗಳು; ಇವರು

ಇದುವರೆಗೆ ಬಹುಸ್ಥಲಗಳಲ್ಲಿ ಹೋದೊಡವೆಗಳನ್ನು ನಿಮಿಷದಲ್ಲಿ ತರಿಸಿ
ಕೊಟ್ಟಿದಾರೆ; ಇವರು ನಾಲ್ಕು ಸಂವತ್ಸರಗಳಿಂದ ವಾನಪ್ರಸ್ಥಾಶ್ರಮ
ವನ್ನು ಸ್ವೀಕರಿಸಿದಾರೆ" ಎಂದು ತಾನು ಆತನನ್ನೆರಡುದಿನಗಳಿಂದ
ಮಾತ್ರ ಅರಿತವನಾದರೂ ಜನ್ಮದಿನದಾರಭ್ಯ ಅರಿತವನಂತೆ ಆತನ
ಚರಿತ್ರೆಯನ್ನು ಹೇಳಿ, 'ನಖಲೋಮಾನ್ವಿವರ್ಜನಾಶ್ರಮೀ' ಎಂಬ ದಕ್ಷಸ್ಮೃ 5
ತಿವಚನವನ್ನು ಹೇಳಿ ಉಗುರುಗಳನ್ನೂ ಕೂದಲನ್ನೂ ಬೆಳಸಿಕೊ
ಳ್ಳುವುದರಿಂದ ವಾನಪ್ರಸ್ಥನಾಗುವನೆಂದು ತಲ್ಲಕ್ಷಣವನ್ನು ಹೇಳಿದನು.
ಆಗ ಹರಿಶಾಸ್ತ್ರಿಯವರು ತಮ್ಮ ಮಂತ್ರಸಾಮರ್ಥ್ಯವನ್ನು ಕೊಂಚ
ಹೊತ್ತು ಹೊಗಳಿಕೊಂಡು ತಾವು ಅದುವರೆಗೆ ಹೋದವಸ್ತುಗಳನ್ನು
ತರಿಸಿಕೊಟ್ಟ ಸ್ಥಲಗಳ ಹೆಸರುಗಳನ್ನು ಬಹು ದಿನಗಳು ಪ್ರಯಾಸ 10
ಪಟ್ಟು ಬರಲಿಸಿದವನಂತೆ ತಡವರಿಸದೆ ಹೇಳಿದರು. ಆಗ ಸಿದ್ಧಾಂತಿಯು
ರುಕ್ಮಿಣಿಯೊಡವೆ ಹೋದಸಂಗತಿಯನ್ನು ಹೇಳಿ, ಅದರ ಜಾಡೆಯನ್ನು
ಹೇಳಬೇಕೆಂದು ಪ್ರಾರ್ಥಿಸಿದನು. ಕೂಡಲೆ ಹರಿಶಾಸ್ತ್ರಿಯವರು
ತಮ್ಮ ಮೂಗಿನ ಪುಟಗಳ ಹತ್ತಿರ ಬೆರಳನಿಟ್ಟುಕೊಂಡು ನೋಡಿ,
ಆಕಾಶದಕಡೆ ದೃಷ್ಟಿಯನ್ನಿಟ್ಟು, ಬೆರಳುಗಳನ್ನು ಮಡಿಸಿ ಏನೋ 15
ಎಣಿಸಿ ನಿಮಿಷ ಆಲೋಚಿಸಿ 'ಹೋದವಸ್ತು ಇಲ್ಲಿಗೆ ಬರುತ ಹೋಗು
ತಿರುವರ ಕೈಯಲ್ಲೇ ಸಿಕ್ಕಿದೆಯಲ್ಲದೆ ಮನೆಯನ್ನು ಬಿಟ್ಟುಹೋಗಿಲ್ಲ'
ಎಂದು ಹೇಳಿದರು. ಅಷ್ಟರೊಳಗೆ ರಾಜಶೇಖರನ ಮುಖಪ್ರಕ್ಷಾಳ
ನವಾದುದರಿಂದ ಎಲ್ಲರೂ ಸೇರಿ ಒಳಕ್ಕೆ ಹೋದರು. ನಡವೆಯಲ್ಲಿ
ನಿಂತುಕೊಂಡು ಹರಿಶಾಸ್ತ್ರಿಯವರು ಒಡವೆಯನ್ನು ತರಿಸಿಕೊಡುವುದು 20
ತಮ್ಮ ಮೇಲಿನಭಾರವೆಂದೂ ಮಧ್ಯಾಹ್ನ ಬಂದು ಯಂತ್ರವನ್ನು
ಹಾಕುವೆವಾದುದರಿಂದ ಆಸಮಯಕ್ಕೆ ಮನೆಯಲ್ಲಿರುವ ಸೇವಕರೆಲ್ಲರೂ
ಸಿದ್ಧವಾಗಿರಬೇಕೆಂದೂ ಹೇಳಿ, 'ಒಳಗಿನಿಂದ ಕೊಂಚ ಅಕ್ಕಿಯನ್ನೀಗ
ತರಿಸಿರಿ' ಎಂದು ಕೋರಿದರು. ಸಿದ್ಧಾಂತಿಯೇ ಒಳಕ್ಕೆ ಹೋಗಿ ಬಂದು
ತಟ್ಟೆಯಲ್ಲಕ್ಕಿಯನ್ನು ತೆಗೆದುಕೊಂಡು ಬಂದು ಶಾಸ್ತ್ರಿಯವರ ಕೋರಿ 25
ಕೆಯಮೇರೆ ಮನೆಯಲ್ಲಿ ಕಾಣಬಂದ ಭೃತ್ಯವರ್ಗವನ್ನು ಕರೆದು
ಕೊಂಡು ಬಂದನು. ಆಮೇಲೆ ಶಾಸ್ತ್ರಿಯವರು ತಮ್ಮ ಮಂತ್ರಪ್ರಭಾ

ವೆವನ್ನು ಕೊಂಚ ಚಿತ್ತೈಸಬೇಕೆಂದು ಬೇಡಿಕೊಂಡು, ಅಲ್ಲಿರುವ
ವರಲ್ಲಾರಾದರೂ ಯಾವುದಾದರೂ ವಸ್ತುವನ್ನು ತೆಗೆದು ರಹಸ್ಯವಾಗಿ
ಬಚ್ಚಿಟ್ಟರೆ ಅವರ ಹೆಸರನ್ನು ಹೇಳುವೆವೆಂದು ಹೇಳಿ, ತಾವು ಬೀದಿಗೆ
ಹೋದರು. ಆಗ ರಾಜಶೇಖರನು ತನ್ನುಂಗುರವನ್ನೊಬ್ಬನ ಕೈಗೆ
5 ಕೊಟ್ಟು ಭದ್ರವಾಗಿಟ್ಟು ಬಾರೆಂದು ಹೇಳಿ ಕಳುಹಿಸಿ, ಅವನು ಹಿಂದಕ್ಕೆ
ಬಂದು ಕುಳಿತುಕೊಂಡ ತರುವಾಯ ಶಾಸ್ತ್ರಿಯವರನ್ನೊಳಕ್ಕೆ ಕರೆದು
ಉಂಗುರವನ್ನು ಬಚ್ಚಿಟ್ಟಿರುವವನನ್ನು ತೋರಿಸಿರೆಂದು ಕೇಳಿದನು.
ಶಾಸ್ತ್ರಿಯವರು ಕೂಡಲೇ ಅಲ್ಲಿದ್ದ ಹತ್ತುಮಂದಿಯು ಕೈಯಲ್ಲೂ
ಸ್ವಲ್ಪ ಸ್ವಲ್ಪ ಅಕ್ಕಿಯನ್ನಿಟ್ಟು ಒಬ್ಬೊಬ್ಬರಾಗಿ ಬಂದು ಅಕ್ಕಿಯನ್ನು
10 ತಟ್ಟೆಯಲ್ಲಿ ಹಾಕಬೇಕೆಂದು ಹೇಳಿ, ತಾವೇನೋ ಮಂತ್ರವನ್ನು
ಜಪಿಸುತ್ತಿದ್ದರು. ಆಗೆಲ್ಲರೂ ವರಿಸೆಯಾಗಿ ಬಂದು ಅಕ್ಕಿಯನ್ನು
ತಟ್ಟೆಯಲ್ಲಿ ಹಾಕಿದರು. ಕೂಡಲೇ ಶಾಸ್ತ್ರಿಯವರು ಉಂಗುರವನ್ನು
ತೆಗೆದಿಟ್ಟವನಿವನೆಂದು ತೋರಿಸಿದರು. ಆಗಲ್ಲಿದ್ದವರೆಲ್ಲರೂ ಅದ್ಭುತ
ರಸಾಕ್ರಾಂತರಾದರು. ರಾಜಶೇಖರನೂ ಆತನು ಮಹಾಮಂತ್ರವೇತ್ತ
15 ನೆಂದೊಪ್ಪಿಕೊಂಡು ನಮಸ್ಕಾರಮಾಡಿ ಹೋದೊಡನೆ ಈತನ ಮಂತ್ರ
ಶಕ್ತಿಯಿಂದ ಬರುವುದೆಂಬ ನಂಬುಗೆಯಿಂದ ಮಧ್ಯಾಹ್ನ ತಪ್ಪದೆ ಬರ
ಬೇಕೆಂದು ಬಲುಬಾರಿ ಪ್ರಾರ್ಥಿಸಿ, ಕರೆದುಕೊಂಡು ಬರಬೇಕೆಂದು
ಸಿದ್ಧಾಂತಿಗೂ ಹೇಳಿದನು. ಸಿದ್ಧಾಂತಿಯೂ ಶಾಸ್ತ್ರಿಯವರೂ ಮುಖ
ವಿಕಾಸದಿಂದ ಸಲ್ಲಾಪಸುಖವನ್ನನುಭವಿಸಿಕೊಳ್ಳುತ್ತ ಮನೆಗೆ ನಡೆದರು.

20 ಇಲ್ಲಿಗೆ ಬರುವಾಗಲೇ ಸಿದ್ಧಾಂತಿಯೂ ಶಾಸ್ತ್ರಿಯವರೂ ರಹ
ಸ್ಯವಾಗಿ ಎಲ್ಲ ಸಂಗತಿಗಳನ್ನೂ ಮಾತಾಡಿಕೊಂಡು ರಾಜಶೇಖರನು
ಕೊಡುವ ಬಹುಮತಿಯನ್ನು ಸಮಭಾಗವಾಗಿ ಹಂಚಿಕೊಳ್ಳುವಂತೆ
ಗೊತ್ತುಮಾಡಿಕೊಂಡಿದ್ದರು. ಆದುದರಿಂದ ರಾಜಶೇಖರನಿಗೆ ನಂಬುಗೆ
ಯನ್ನು ಹುಟ್ಟಿಸುವುದಕ್ಕೋಸ್ಕರ ಮುಂದಾಗಿ ಮಾಡಬೇಕಾದ ತಂತನ್ನು
25 ಕೂಡ ಮಾತಾಡಿಕೊಂಡ ತರುವಾಯ, ವಸ್ತುವನ್ನು ಬಚ್ಚಿಟ್ಟವನು
ತಟ್ಟೆಯಲ್ಲಿ ಅಕ್ಕಿಯನ್ನು ಹಾಕಿದೊಡನೆಯೇ ತಾನು ಹಾಕುವೆನೆಂದೂ,
ಅವನದನ್ನು ತೆಗೆದಿಟ್ಟಿದಾನೆಂದು ಹೇಳಬೇಕೆಂದೂ, ಸಿದ್ಧಾಂತಿಯು ಮನೆ

ಯಲ್ಲೇ ನಿರ್ಣಯಮಾಡಿದ್ದನಾದುದರಿಂದ ಶಾಸ್ತ್ರಿಯವರು ಆತನ ಸಹಾ
ಯದಿಂದ ಉಂಗುರವನ್ನು ತೆಗೆದಿಟ್ಟವನನ್ನು ನಿಮಿಷದಲ್ಲಿ ತೋರಿಸಲಾ
ದರು.

ಮಧ್ಯಾಹ್ನ ಭೋಜನಮಾಡಿ ಮನೆಯಿಂದ ಹೊರಟು ಬೇಕಾದ
ಪರಿಕರಗಳೊಂದಿಗೆ ಸಿದ್ಧಾಂತಿಯೂ ಹರಿಶಾಸ್ತ್ರಿಯವರೂ ಬಂದು ರಾಜ 5
ಶೇಖರನ ಮನೆಯನ್ನು ಸೇರಿದರು. ಅದಕ್ಕೆ ಮುಂಚೆಯೇ ಮನೆಯ
ಲ್ಲಿದ್ದ ಪರಿಚಾರಕರೂ ಇತರರೂ ಕರೆಯಿಸಲ್ಪಟ್ಟರು. ಹರಿಶಾಸ್ತ್ರಿಗ
ಳಿಗೆ ಕೇಳಬರುವಂತೆ ಸಿದ್ಧಾಂತಿಯು—ರಥೋತ್ಸವಸಮಯದಲ್ಲಿ ರುಕ್ಮಿಣಿ
ಯೊಂದಿಗೆ ಯಾರುಯಾರು ಗುಡಿಗೆ ಹೋಗಿದ್ದರೋ, ಕಾಸಿನಸರ
ಹೋದಾಗ ಯಾರುಯಾರೆಲ್ಲೆಲ್ಲಿದ್ದರೋ—ಆಸಂಗತಿಗಳನ್ನು ಸಂಗಡ 10
ಹೋಗಿದ್ದವರನ್ನು ಕೇಳಿ ತಿಳಿದುಕೊಳ್ಳುತಿದ್ದನು. ಅಷ್ಟರಲ್ಲಿ ಸಿದ್ಧಾಂತಿ
ಬಂದು ರಹಸ್ಯವಾಗಿ ಶಾಸ್ತ್ರಿಯವರ ಕಿವಿಯಲ್ಲೊಂದು ಮಾತನ್ನುಹೇಳಿ
ಮರಳಿ ಹೋಗಿ ಏನೇನೋ ಸಂಗತಿಗಳನ್ನು ಮಾತಾಡುತಿದ್ದನು. ಈ
ಮಧ್ಯೇ ರಾಜಶೇಖರನು ಬಂದು ಅವರೆಲ್ಲರನ್ನೊಳಕ್ಕೆ ಬನ್ನಿ ಎಂದು
ಕರೆದನು. ಹರಿಶಾಸ್ತ್ರಿಯವರು ಅಮ್ಮನವರ ಪೆಟ್ಟಿಗೆಯನ್ನು ತೆಗೆದು 15
ಕೊಂಡೀಗಲೇ ಬರುವೆನೆಂದು ಹೇಳಿ ಹೋಗಿ ಬಂದು ಘಳಿಗೆಯಮೇಲೆ
ಬಂದು ಹಿತ್ತಳೆಯ ಪೆಟ್ಟಿಗೆಯನ್ನು ಹಿಡಿದುಕೊಂಡು ಬಲಗೈಗೊಂದು
ತಾಮ್ರದ ಕಡಗವನ್ನು ತೊಟ್ಟುಕೊಂಡು ಪುನಃ ಬಂದು, ಸಾರಿಸಿದ್ದ
ಹಜಾರದಲ್ಲಿ ನಾನಾಬಣ್ಣದ ಹಿಟ್ಟುಗಳಿಂದೊಂದುವಿಗ್ರಹವನ್ನುಹಾಕಿ
ಅದರ ನಾಭೀಸ್ಥಾನದಲ್ಲಿ ತಾವು ತಂದಿದ್ದ ಹಿತ್ತಳೆಯ ಪೆಟ್ಟಿಗೆಯನ್ನಿಟ್ಟು 20
ಮುಚ್ಚಳವನ್ನು ತೆರೆದು ' ಜಯ ಜನನೀ ' ಎಂದು ಕೂಗಿ, ಕೊಂಚ
ಹೊತ್ತು ಕಣ್ಣುಗಳನ್ನು ಮುಚ್ಚಿಕೊಂಡು ಜಪಮಾಡಿ, ರಾಜಶೇಖರನ
ಕಡೆ ನೋಡಿ ಬಂದು ಬಿಳಿಯಕಾಗದವನ್ನು ಕೊಡಿರೆಂದು ಕೇಳಿದರು.
ಆಕಾಲದಲ್ಲಿ ಕೊಂಡಪಲ್ಲಿಯ ಕಾಗದಗಳುವಿನಾ ಇನ್ನಾವತೆರದ ಕಾಗ
ದಗಳೂ ಇರಲಿಲ್ಲ. ರಾಜಶೇಖರನ ಮಗನು ಒಳಕ್ಕೆ ಹೋಗಿ ಬಂದು 25
ಬಿಳಿಯಕಾಗದವನ್ನು ತೆಗೆದುಕೊಂಡು ಬಂದು ಕೊಟ್ಟನು. ಆಗ ಆಕಾ
ಗದವನ್ನೆಲ್ಲರೂ ನೋಡುತಿರುವಂತೆ ಸಮವಾದೆಂಟುತುಂಡುಗಳಾಗಿ

ಮಾಡಿ ಅದರಲ್ಲೊಂದುತುಂಡನ್ನು ತನ್ನ ಹತ್ತಿರಿಟ್ಟುಕೊಂಡು ಮಿಕ್ಕೇಳು
ತುಂಡುಗಳನ್ನು ರಾಜಶೇಖರನ ಕೈಗೆ ಕೊಟ್ಟುಬಿಟ್ಟು ತಾನುಪಾಸಿಸುವ
ದೇವತೆಯ ಶಕ್ತಿಯಿಂದ ಒಡವೆಯನ್ನು ಕದ್ದವನ ಹೆಸರು ಆಕಾಗದದ
ತುಂಡಿನಮೇಲಕ್ಕೆ ಬರುವುದೆಂದು ಹೇಳಿ, ಆತುಂಡನ್ನು ಹಿತ್ತಾಳೆಯ
5 ಪೆಟ್ಟಿಗೆಯಲ್ಲಿ ನಿಮಿಷದ ಹೊತ್ತಿಟ್ಟಿದ್ದು ಒಂದು ಮಂತ್ರವನ್ನು ಜಪಿಸಿ
ಆತುಂಡನ್ನು ಪುನಃ ಮೇಲಕ್ಕೆ ತೆಗೆದು ತನ್ನ ಕೈಯಲ್ಲಿಟ್ಟುಕೊಂಡೆಲ್ಲ
ರಿಗೂ ತೋರಿಸಿ, ಅದರ ಮೂಲೆಗಳಿಗೆ ಕುಂಕುಮವನ್ನು ಹಚ್ಚಿ, ಆರತಿ
ಕರ್ಪೂರದ ಗಡ್ಡೆಯಿಂದದರಮೇಲೆ ಬೀಜಾಕ್ಷರಗಳನ್ನೂ ಯಂತ್ರ
ವನ್ನೂ ಬರೆದು ಕೆಳಗಿಟ್ಟು, ಒಬ್ಬೊಬ್ಬರಾಗಿ ಬಂದು ಅದರಮೇಲೆ
10 ಕೈಯಿಟ್ಟು ಹೋಗಬೇಕೆಂದಾಜ್ಞಾಪಿಸಿದರು. ಸ್ಪಷ್ಟವಾಗಿ ಕಾಣಿಸು
ತಿದ್ದ ಆಬಿಳಿಯಕಾಗದದಮೇಲೆಲ್ಲರೂ ಕೈಹಾಕಿ ಹೋಗಿ ಏನು ನಡೆಯು
ವುದೋ ನೋಡೋಣವೆಂಬ ಕುತೂಹಲದಿಂದ ತಮ್ಮ ಸ್ಥಾನಗಳಲ್ಲಿ
ಕುಳಿತುಕೊಂಡು ನೋಡುತಿದ್ದರು. ಎಲ್ಲರೂ ಮುಟ್ಟಿಹೋದ ತರು
ವಾಯ ಹರಿಶಾಸ್ತ್ರಿಯವರು ಆತುಂಡನ್ನು ತೆಗೆದು ಸಾಂಬ್ರಾಣಿಯ
15 ಧೂಪವನ್ನು ಹಾಕಿ, ಆರತಿಕರ್ಪೂರವನ್ನುರಿಸಿ ಅದರಮೇಲೆ ಆಕಾಗದದ
ತುಂಡನ್ನು ನಾಲ್ಕೈದುಸಾರಿ ಇಟ್ಟು ರಾಜಶೇಖರನಕೈಗೆ ಕೊಟ್ಟರು.
ಆತನು ಕೈಯಲ್ಲಿ ತೆಗೆದುಕೊಂಡು ನೋಡುವಾಗ್ಗೆ ಅದರಮೇಲೆ
ದೊಡ್ಡಕ್ಷರಗಳಿಂದ “ ಅಗಸರ ಸರನು ” ಎಂದು ಬರೆದಿತ್ತು. ಆಕಾಗ
ದವನ್ನು ಮೇಲಕ್ಕೆತ್ತಿದ ಕೂಡಲೇ ಎಲ್ಲರಿಗೂ ಸ್ಪಷ್ಟವಾಗಿ ಸೊಟ್ಟನೆ
20 ಯಾದಕ್ಷರಗಳು ಕಾಣಬಂದುವು. ಹತ್ತಿರಿದ್ದವರಲ್ಲೊಬ್ಬನು ಅದನ್ನು
ತೆಗೆದುಕೊಂಡೋದುವಾಗ್ಗೆ ಅಗಸರ ಸರ್ವನೊಬ್ಬನುವಿನಾ ಮಿಕ್ಕವರೆ
ಲ್ಲರೂ ಅದ್ಭುತಪ್ರಮೋದಮಗ್ನಮಾನಸರಾಗಿ ಚಪ್ಪಾಳೆಹೊಡೆದು
ಶಾಸ್ತ್ರಿಯವರ ಶಕ್ತಿಯನ್ನೂ ಉಪಾಸನಾಬಲವನ್ನೂ ಸಾವಿರಸಾರಿ
ಕೊಂಡಾಡತೊಡಗಿದರು. ಅಲ್ಲಿದ್ದವರಲ್ಲಿ ಕೆಲಬರು ‘ ಇವನೇ ಒಡವೆ
25 ಯನ್ನು ಕದ್ದಕಳ್ಳ ; ಆಗ ಹಿಂದೆ ನಿಂತಿದ್ದನು ’ ಎಂದು ಅವನನ್ನು
ನಿಂದಿಸಸಾಗಿದರು. ಸೀತೆಯು ಬಂದು ಕಾಸಿನಸರ ಹೋದಾಗ ಸರ್ವಿಗನು
ಹಣ್ಣುಗಳನ್ನು ಕೈಯಲ್ಲಿ ಹಿಡಿದುಕೊಂಡು ನಮ್ಮ ಹಿಂದೆ ನಿಂತಿದ್ದನೆಂದು

ಹೇಳಿದಳು. ಅದರಮೇಲೆಲ್ಲರೂ ಬಡವೆಕದ್ದವನು ಅಗಸರಸರ್ವಿಗನಲ್ಲದೆ
ಮತ್ತೊಬ್ಬನಲ್ಲವೆಂದು ನಿಶ್ಚಯಿಸಿದರು. ಮನೆಯಲ್ಲಿದ್ದವರೂ ರಾಜಶೇ
ಖರನೂ ಆಪ್ರಕಾರವಾಗಿಯೇ ನಂಬಿದರು. ಬಡವೆಯನ್ನು ಬೇಗ
ತಂದುಕೊಡೆಂದು ಕೇಳಿದಾಗ ಆ ಅಗಸನು ಕಣ್ಣಿಗೂ ನೆಲಕ್ಕೂ ಏಕ
ಧಾರೆಯಾಗಿ ರೋದನಮಾಡುತ ತಾನಾವದೋಷವನ್ನೂ ಅರಿಯೆನೆಂದು 5
ಮಕ್ಕಳಮೇಲೂ ಭಾರ್ಯೆಯಮೇಲೂ ಆಣೆಯಿಡಸಾಗಿದನು. ಆದರೆ
ಅದೆಲ್ಲವೂ ಕಳ್ಳಳುವೆಂದೆಲ್ಲರೂ ನಿಶ್ಚಯಿಸಿದರು. ನಯದಿಂದಲೂ
ಭಯದಿಂದಲೂ ಎಷ್ಟು ವಿಧಗಳಲ್ಲಿ ಕೇಳಿದರೂ ಅವನು ತಾನು ನಿರಪ
ರಾಧಿಯೆಂದೇ ಹೇಳಿ ಅಳುತ ಬಂದುದರಿಂದ, ಹರಿಶಾಸ್ತ್ರಿಯವರು ರಾಜ
ಶೇಖರನನ್ನು 'ಒಂದು ಮಾತು' ಎಂದು ಬೇರೆ ಕರೆದುಕೊಂಡು 10
ಹೋಗಿ 'ನಿಮ್ಮಾಜ್ಞೆಯಾದಪಕ್ಷದಲ್ಲಿ ಇವನಿಗೆ ಪ್ರಯೋಗಮಾಡಿ
ಹೋಗಿರುವ ವಸ್ತುವನ್ನು ತರಿಸುವೆನು' ಎಂದು ಹೇಳಿದರು. ಅವನು
ಚಿಕ್ಕಂದಿನಿಂದ ಬಹುನಂಬಿಕೆಯಾಗಿ ಕೆಲಸಮಾಡಿದವನಾದುದರಿಂದ ಅವ
ನಿಗೆ ಯಾವ ಹಾನಿಯನ್ನು ಮಾಡಲೂ ಮನಸ್ಸೊಡಂಬಡದೆ ರಾಜಶೇಖ
ರನು ಅವನನ್ನು ಕೆಲಸದಿಂದಮಾತ್ರ ತೊಲಗಿಸಿಬಿಟ್ಟನು. ಅವನು ತಾನು 15
ನಿರಪರಾಧಿಯೆಂದಳುತ ಮನೆಗೆ ಹೋದನು.

ಮೊದಲು ಸಿದ್ಧಾನ್ತಿಯು ಶಾಸ್ತ್ರಿಯವರ ಕಿವಿಯಲ್ಲಿ ರಹಸ್ಯ
ವಾಗಿ ಹೇಳಿದುದು ಅಗಸರಸರ್ವನ ಹೆಸರನ್ನು ಬರೆಯಿರೆಂದೇ.
ಅವರು ಅಮ್ಮನವರ ಪೆಟ್ಟಿಗೆಯನ್ನು ತರುವ ಮಿಷೆಯಿಂದ ಹೊರಕ್ಕೆ
ಹೋಗಿ ಒಂದುಕಾಗದದ ಮೇಲೆ ನೀರುಳ್ಳಿಯ ರಸದಿಂದ "ಅಗಸರ 20
ಸರನು" ಎಂದು ಅಕ್ಷರಜ್ಞಾನ ಚೆನ್ನಾಗಿಲ್ಲದುದರಿಂದ (್ವ) ವಾ
ಒತ್ತನ್ನು ಬಿಟ್ಟು ಬರೆದು ಒಣಗಿಸಿ ಪೆಟ್ಟಿಗೆಯಲ್ಲಿಟ್ಟು ಕೊಂಡು
ಬಂದರು. ರಾಜಶೇಖರನ ಮಗನು ಕಾಗದವನ್ನು ತೆಗೆದುಕೊಂಡು
ಬಂದಾಗ ತಾವಾಹೆಸರನ್ನು ಬರೆದಿದ್ದ ಕಾಗದದಷ್ಟರ ತುಂಡನ್ನು
ಹರಿದುಕೊಂಡು ಮಿಕ್ಕುದನ್ನು ಕೊಟ್ಟುಬಿಟ್ಟು, ಅದನ್ನು ಪೆಟ್ಟಿಗೆಯ 25
ಲ್ಲಿಟ್ಟಾಗ ಬದಲುಮಾಡಿ ಮೊದಲಿನ ಕಾಗದವನ್ನು ಮೇಲಕ್ಕೆ ತೆಗೆ
ದರು. ಅದೂ ಇನ್ನೊಂದರಂತೆಯೇ ಇದ್ದಕಾರಣ ಯಾರೂ ಅನು

ವೂನಪಡಲಿಲ್ಲ. ಆಕಾಗದದಮೇಲೆ ಆರತಿಕರ್ಪೂರದಿಂದ ಬೀಜಾಕ್ಷ
ರಗಳನ್ನು ಬರೆದುದು ನೀರುಳ್ಳಿಯರಸಾತ ಹೋಗುವುದಕ್ಕಲ್ಲದೆ ಮತ್ತಾ
ವುದಕ್ಕೂ ಅಲ್ಲ. ತರುವಾಯ ಸಾಂಬ್ರಾಣಿಯ ಹೊಗೆಯಲ್ಲೂ
ಕರ್ಪೂರದದೀಪದಮೇಲೂ ಇಡೋಣವು ಮೊದಲು ಕಾಣಿಸದಿದ್ದಕ್ಷ
5 ರಗಳು ಸ್ಫುಟವಾಗಿ ಕಾಣಿಸುವುದಕ್ಕೋಸ್ಕರವಾಗಿ ಮಾಡಿದ ತಂತು.
ಈಪ್ರಕಾರವಾಗಿ ತಮ್ಮ ಮಂತ್ರಪ್ರಭಾವದಿಂದ ಶಾಸ್ತ್ರಿಯವರಷ್ಟುಘನ
ಕಾರ್ಯವನ್ನು ಮಾಡಿದುದಕ್ಕಾಗಿ ಒಡವೆ ಸಿಕ್ಕದಿದ್ದರೂ ರಾಜಶೇಖರನು
ಆತನಿಗೊಂದು ಧೋತ್ರದ ಜತೆಯನ್ನುಡುಗರೆಯಾಗಿ ಕೊಟ್ಟು ನಾಲ್ಕು
ರೂಪಾಯಿಗಳ ರೊಕ್ಕವನ್ನೂ ಕೊಟ್ಟನು. ಮನೆಗೆ ಹೋದತರು
10 ವಾಯ ಹರಿಶಾಸ್ತ್ರಿಯವರೂ ಸಿದ್ಧಾಂತಿಯೂ ಅದನ್ನು ಸಮಭಾಗ
ವಾಗಿ ಹಂಚಿಕೊಂಡರು.

ಆಮಾರನೆಯದಿನ ಜಾವದ ಹೊತ್ತೇರಿದ ತರುವಾಯ ರುಕ್ಮಿಣಿ
ಯೊಬ್ಬಳೇ ಪಶ್ಚಿಮದ ಹಜಾರದಲ್ಲಿ ಕುಳಿತುಕೊಂಡು ಕಣಿಯವಳು
ಹೇಳಿದ ಗಡು ನಿನ್ನೆಗೆ ಕಳೆದುಹೋಯಿತಲ್ಲ, ಇನ್ನೂ ಗಂಡನು ಬರಲಿ
15 ಲ್ಲವಲ್ಲ ಎಂದು ನೆನೆಪಿಡುತ ಒಡವೆ ಹೋದುದಕ್ಕಾಗಿಯೂ ವಿಚಾರಪಡು
ತಿದ್ದಳು. ಆಸಮಯದಲ್ಲಿ ಇಪ್ಪತ್ತು ಸಂವತ್ಸರಗಳ ವಯಸ್ಸಿನವ
ನೊಬ್ಬ ಹುಡುಗನು ಒಳಕ್ಕೆಬಂದು ಕೈಯಲ್ಲಿದ್ದ ಬಟ್ಟೆಗಳ ಗಂಟನ್ನು
ಕೆಳಕ್ಕೆ ಕೆಡವಿ ರುಕ್ಮಿಣಿಯ ಮುಖದಕಡೆ ನೋಡಿ ಗಟ್ಟಿಯಾಗಿ ಅತ್ತನು.
ಅದನ್ನು ನೋಡಿ ರುಕ್ಮಿಣಿ ಸಂಗತಿ ಯೇನೋ ತಿಳಿದುಕೊಳ್ಳದೆ ತಾನೂ
20 ಅಳುವುದಕ್ಕೆ ಪ್ರಾರಂಭಿಸಿದಳು. ಆರೋದನಧ್ವನಿಯನ್ನು ಕೇಳಿ
ಮನೆಯಲ್ಲಿದ್ದವರೆಲ್ಲರೂ ಒಳಗಿನಿಂದ ಓಡಿಬಂದು ಏನೆಂದು ಕೇಳಿದರು.
ಆಗ ಆಹುಡುಗನು ಕಣ್ಣಿನಲ್ಲಿ ನೀರು ತುಂಬಿಕೊಂಡು ಗದ್ಗದಸ್ವರದಿಂದ
ರುಕ್ಮಿಣಿಯ ಗಂಡನಾದ ನೃಸಿಂಹಸ್ವಾಮಿಯು ಕಾಶಿಯಿಂದ ಬರುತ ದಾರಿ
ಯಲ್ಲಿ ಜಗನ್ನಾಥದ ಹತ್ತಿರ ಪುಷ್ಯಶುದ್ಧನವಮಿದಿವಸ ಗ್ರಹಣೀ
25 ಜಾಡ್ಯದಿಂದ ಕಾಲಧರ್ಮವನ್ನು ಹೊಂದಿದನೆಂದೂ ದಹನಾದಿಕೃತ್ಯಗ
ಳನ್ನು ತಾನೇ ಮಾಡಿದೆನೆಂದೂ ಹೇಳಿದನು. ಆಮಾತನ್ನು ಕೇಳು
ತಲೇ ಮನೆಯಲ್ಲಿದ್ದವರೆಲ್ಲರೂ ಒಂದೇಸಾರಿ ಗೋಳೋ ಎಂದು ಅತ್ತರು.

ಆ ಆಕ್ರಂದನಧ್ವನಿಯನ್ನು ಕೇಳಿ ಹಜಾರದಲ್ಲಿದ್ದ ರಾಜಶೇಖರನೂ ನೆರೆ ಮನೆಗಳವರೂ ಬಂದುಕಾರಣವನ್ನು ತಿಳಿದುಕೊಂಡು ಹಲವುಬಗೆ ಯಾಗಿ ವಿಲಾಪಿಸಿದರು. ಆಗಲ್ಲಿದ್ದ ಹಿರಿಯರೆಲ್ಲರೂ ಅವರಿಗೆ ಸಮಾಧಾ ನಹೇಳಿ ಸ್ನಾನಮಾಡಿಸಿ ವೇದಾಂತವಚನಗಳನ್ನುಪದೇಶಮಾಡತೊಡಗಿ ದರು. ಹೀಗೆ ಕೆಲವು ದಿನಗಳು ಕಳೆದ ತರುವಾಯ ಬಂಧುಗಳು ಮುಂತಾದವರು ರುಕ್ಮಿಣಿಗೆ ಶಿರೋಜಗಳನ್ನು ತೆಗಿಸುವ ವಿಷಯದಲ್ಲಿ ರಾಜಶೇಖರನೊಂದಿಗೆ ಪ್ರಸ್ತಾಪಿಸಿದರೂ ಆತನು ತನ್ನ ಮಗಳ ಮೇಲಿನ ಪ್ರೇಮದಿಂದ ಚಿಕ್ಕತನದಲ್ಲೇ ಆಕಲಸವನ್ನು ಮಾಡಿಸುವುದ ಕ್ಕೊಪ್ಪಲಿಲ್ಲವಾದುದರಿಂದ ಎಲ್ಲರೂ ಅದರಿಂದೊಂದು ಬಾಧಕವಿಲ್ಲವೆಂದು ಹೇಳಿ ಆತನು ಹೇಳಿದುದೇ ಸರಿಯೆಂದೊಪ್ಪಿಕೊಂಡರು.

ನಮ್ಮ ದೇಶದಲ್ಲಿ ಪತಿರಹಿತೆಯರಾದ ಯುವತಿಯರ ದುರವಸ್ಥೆ ಯನ್ನು ನೆನಸಿಕೊಂಡಮಾತ್ರದಿಂದ ಹಗೆಯವರಿಗಾದರೂ ಮನಸ್ಸು ಕಳಕ್ಕೆನ್ನದೆ ಇರದು. ಪತಿಶೋಕವನ್ನು ಮರೆಯುವಂತೆಮಾಡಿ ಆದ ರಿಸಬೇಕಾದ ತಾಯಿತಂದೆಗಳೇ ಜೀವಿತೇಶ್ವರನು ಹೋದುದರಿಂದ ದುಃಖಸಮುದ್ರದಲ್ಲಿ ಮುಳುಗಿರುವ ತಮ್ಮ ಹೊಟ್ಟೆಯಲ್ಲಿ ಹುಟ್ಟಿದ ಕುಮಾರಿಯರನ್ನು ಕರುಣೆಯಿಲ್ಲದೆ ಸಮಸ್ತಾಲಂಕಾರಗಳಗೂ ದೂರ ಮಾಡಿ, ತಲೆಬೋಳಿಸಿ ವಿರೂಪಿಯರಾಗಿಮಾಡಿ ಮುಸುಕುಹಾಕಿಸಿ ಮೂಲೆಯಲ್ಲಿ ಕುಳ್ಳಿರಿಸುವರು ; ಎರಡು ಹೊತ್ತೂ ಹೊಟ್ಟೆತುಂಬ ತಿಂಡಿಯನ್ನೂ ಇಡದೆ ಸುಟ್ಟು, ಎಲ್ಲರ ಭೋಜನೆಗಳೂ ಆದಮೇಲೆ ಮೂರುಜಾವಕ್ಕೆ ಸ್ವಲ್ಪ ಅನ್ನವನ್ನು ಹಾಕುವರು ; ಮನಸ್ಸಿದ್ದರೂ ಬಿಳ್ಳಿಯಬಟ್ಟೆಯುಡುವುದಕ್ಕಿಲ್ಲದೆ ಸಣ್ಣಂಚಿನ ಒರಟುಸೀರೆಯನ್ನುಡು ವುದಕ್ಕೆ ಕೊಡುವರು. ಸಾವಿರ ಮಾತೇಕೆ ? ಗಂಡ ಹೋದವರ ಜೀವ ನಗಳನ್ನೇ ದುಃಖಭಾಜನಗಳಾಗಿ ಮಾಡಿ, ಅವರನ್ನು ಜೀವಚ್ಛವ ಗಳಾಗಿ ಮಾಡುವರು. ಯಾರಿಂದಲೂ ಇಡಲ್ಪಡದೆ ಹುಟ್ಟುವಾಗಲೇ ಭಗವಂತನಿಂದ ಅಲಂಕಾರವಾಗಿ ಕೊಡಲ್ಪಟ್ಟಿರುವುದಾಗಿಯೂ ಚಿಕ್ಕಂದಿ ನಿಂದ ಎಣ್ಣೆಸವರಿ ಬಾಚಿ ಪ್ರಾಣಕ್ಕೆ ಸಮಾನವಾಗಿ ಬೆಳಸಲ್ಪಡುವುದಾ ಗಿಯೂ ಇರುವ ಚೆಲುವಾದ ಶಿರೋಜಗಳನ್ನು ನಿರ್ದಯನಾದ ನಾಯಿಂ

ದನ ಕತ್ತಿಗೊಪ್ಪಿಸುವುದಕ್ಕಿಂತ ಮಾನವತಿಯರಿಗೆ ಪ್ರಾಣತ್ಯಾಗವೇ
ಮೇಲೆಂದು ತೋರುವುದು; ಮನೆಯಲ್ಲಿ ಕಷ್ಟವಾಗಿಯೂ ನೀಚವಾ
ಗಿಯೂ ಇರುವ ಕೆಲಸಗಳೆಲ್ಲ ಅವರಮೇಲೆಯೇ ಬೀಳುವುವು; ತೌರು
ಮನೆಸೇರುತಲೇ ಅತ್ತಿಗೆನಾದಿನಿಯರು ದಾಸಿಯಾಗಿ ನೋಡುವರು;
5 ಗೌರವವೆಂಬ ಮಾತಿರದು; ಶುಭಕಾರ್ಯಗಳಲ್ಲಿ ನಾಲ್ವರಲ್ಲಿ ತಲೆಯೆತ್ತಿ
ಕೊಂಡು ತಿರುಗುವ ಪುಣ್ಯವಿಲ್ಲದಿದ್ದರೂ ಮುಖಕಾಣಿಸಿದ ಮಾತ್ರ
ದಿಂದ ಎಲ್ಲರೂ ದುಶ್ಶಕುನವಾಯಿತೆಂದು ದೂಷಿಸದೆ ಬಿಡರು. ಈ
ಹೇತುಗಳಿಂದಲೇ 'ವಿಧವೆ' ಎಂಬ ಮಾತೇ ಕೇಳುವುದಕ್ಕೆ ಶೂಲದಂತೆ
ಕರ್ಣಕಠೋರವಾಗಿರುವುದು; ಯಾರನ್ನಾದರೂ ವಿಧವೆಯೆಂದು
10 ಕರೆದಮಾತ್ರದಿಂದ ಘೋರವಾಗಿ ಬೈದಂತೆ ತಿಳಿದುಕೊಂಡು ಉರಿದು
ಬೀಳುವರು.

ಈಸ್ಥಿತಿಯೆಲ್ಲಾ ಕಣ್ಣಿದಿರಿಗೆ ಕಟ್ಟಿದಂತೆ ಕಾಣಿಸಿ, ಆವರ್ತ
ಮಾನವು ತಿಳಿದ ದಿವಸದಿಂದ ರುಕ್ಮಿಣಿ ರಾತ್ರಿಯೂ ಹಗಲೂ ಕೊಠಡಿ
ಯಿಂದೀಚೆಗೆ ಬಾರದೆ ನಿದ್ರಾಹಾರಗಳನ್ನು ಬಿಟ್ಟು ಗಂಡನಿಗಾಗಿ ಶೋ
15 ಕಿಸುತ ಕೃಶವಾಗುತ ಹೋದಳು. ಈವ್ಯಸನದೊಂದಿಗೆ ಯಾವುದೋ
ವ್ಯಾಧಿಯೂ ಕೂಡ ಆಶ್ರಯಿಸಿತು. ಆಕೆ ಏಳಲಾರದಷ್ಟು ಬಲಹೀನ
ಳಾಗುವವರೆಗೂ ವ್ಯಾಧಿಯ ಸಂಗತಿಯನ್ನಾರೂ ಕಂಡುಕೊಂಡವರಾಗ
ಲಿಲ್ಲ. ಕಂಡಕೂಡಲೇ ರಾಜಶೇಖರನು ಘನವೈದ್ಯನೆಂದು ಪ್ರಸಿದ್ಧನಾ
ಗಿದ್ದ ಜಂಗಮಬಸವಯ್ಯನನ್ನು ಕರೆಯಿಸಿ ಕೈನೋಡಿಸಿದನು. ಆತನು
20 ರುಕ್ಮಿಣಿ ಮಲಗಿದ್ದ ಮಂಚದಮೇಲೆ ಕುಳಿತುಕೊಂಡು ಎಡಗೈಯನ್ನು
ಹಿಡಿದುಕೊಂಡು ನಾಡಿಯನ್ನು ನಿಧಾನಿಸಿನೋಡಿ ವಾತನಾಡಿ ವಿಶೇಷವಾಗಿ
ಆಡುತಿದೆ ಎಂದು ಹೇಳಿ ಆಕೆಗೆ ಬಹು ದಿನಗಳಿಂದ ಶೀತಜ್ವರ ಬರುತಿ
ದೆಯೆಂದೂ ಕೂಡಲೇ ಕಂಡುಕೊಳ್ಳಲಿಲ್ಲವಾದುದರಿಂದ ಜ್ವರವು ದೇಹ
ದಲ್ಲೇ ಜೀರ್ಣಿಸಿದೆಯೆಂದೂ ಹೇಳಿ, ವೈದ್ಯಗ್ರಂಥದಿಂದ—ಶ್ಲೋ ||
25 ಪಾಠಾದಾರ್ವಿಮಹಾಬಲಾ ತ್ರಿಕಟುಕಾ ಜಾಜೀರಸೋನಾಸ್ತಥಾ | ವಿಷ್ಣು
ಕ್ರಾಂತಸಿನಾಡಿಕಾಗೃಹಭವೋಧೂಮಸ್ತುಲಸ್ಯಾದ್ವಯಂ | ನಾರಂಗಸ್ಯಶ
ಲಾಟುಪತ್ರಮರಲುತ್ವಕ್ಪತ್ರನಿರ್ಗುಂಡಿಕಾ | ಭಾರ್ಗೀಪಕ್ವವಟಿಕ್ಷ್ವದಾ

ಕ್ಷ್ಯಸಕಲಾನ್ ಶೀತಜ್ವರಾನ್ನಾಶಯೇತ್ ॥ ಎಂಬ ಶ್ಲೋಕವನ್ನು ಹೇಳಿ, ತರಿಸಬೇಕಾದ ವಸ್ತುಗಳನ್ನೊಂದು ಕಾಗದದಮೇಲೆ ಬರೆಯಿಸಿ ಮನೆಗೆ ಹೋದನು. ಆಮಧ್ಯಾಹ್ನವೇ ರಾಜಶೇಖರನು ಆಪದಾರ್ಥಗಳೆಲ್ಲ ವನ್ನೂ ತರಿಸಿ ವೈದ್ಯನಿಗೆ ವರ್ತಮಾನಕಳುಹಿಸಿದುದರಿಂದ, ಆತನು ಬಂದು ಆಪದಾರ್ಥಗಳನ್ನು ಚೂರ್ಣಮಾಡಿಸಿ ಪೊಟ್ಟಣಗಳನ್ನು ಕಟ್ಟಿ, ಜೇನುತುಪ್ಪವನ್ನು ಅನುಪಾನವನ್ನಾಗಿ ಮಾಡಿ ಮೂರು ಹೊತ್ತಿಗೂ ಮೂರು ಪೊಟ್ಟಣಗಳನ್ನು ಕೊಡೆಂದು ಹೇಳಿ, ಎಣ್ಣೆ, ಕುಂಬಳ ಕಾಯಿ, ಬಸಲೆಯಸೊಪ್ಪು, ಹುಳಿ, ಕಂದಗಡ್ಡೆ, ಹಲಸು ಮಾತ್ರ ಸೋಕಕೊಡದೆಂದು ಪಥ್ಯವನ್ನು ವಿಧಿಸಿ, ಪ್ರತಿದಿನವೂ ಎರಡುಸಾರಿ ಬಂದು ಕೈನೋಡಿ ಗುಣವನ್ನು ತಿಳಿದುಕೊಂಡು ಹೋಗುತಿದ್ದನು. ಮೊದಲು ರುಕ್ಮಿಣಿಗೆ ಶರೀರವು ಸ್ವಸ್ಥಪಡಲಾರಂಭಿಸಿದರೂ ತರುವಾಯ ರಾತ್ರಿ ಹಲುಬುವುದು ಮೊದಲಾದುವು ಹುಟ್ಟಿ ಜ್ವರವು ಅಧಿಕವಾಯಿತು. ಆಗ ವೈದ್ಯನನ್ನು ಕರೆಯಿಸಿ ಜ್ವರವಿನ್ನೂ ಏತಕ್ಕೆ ಬಿಡಲಿಲ್ಲವೆಂದು ಕೇಳಲಾಗಿ, ಆತನು "ರೇವತ್ಯಾಮನುರಾಧಾಯಾಂ ಜ್ವರೋ ಬಹುದಿನಂಭವೇತ್" ಎಂದು ಹೇಳಿ ಈಜ್ವರವು ರೇವತೀ ನಕ್ಷತ್ರದಲ್ಲಿ ಬಂದುದಾದುದರಿಂದ ಬಹುದಿನಗಳಾದ ಹೊರತು ಹೋಗದೆಂದು ಹೇಳಿದನು. ಆದರೆ ಆತನ ಮಾತುಗಳಲ್ಲಿ ಅಷ್ಟು ನಂಬುಗೆ ಹುಟ್ಟದೆ ಗ್ರಾಮದಲ್ಲಿನ ಮತ್ತೊಬ್ಬ ವೈದ್ಯನನ್ನು ಕರೆಯಿಸಿ, ರಾಜಶೇಖರನು ರುಕ್ಮಿಣಿಯನ್ನು ನೋಡಿಸಿದನು. ಆತನು ಕೈನೋಡಿ ಪೈತ್ಯಜ್ವರವೆಂದು ಹೇಳಿ, ಮೂರು ಹೊತ್ತಿನಲ್ಲಿ ರುಕ್ಮಿಣಿಯ ಶರೀರವನ್ನು ವಜ್ರಶರೀರವನ್ನಾಗಿ ಮಾಡುವೆನೆಂದು ಪ್ರಗಲ್ಭವಚನಗಳನ್ನು ಹೇಳಿ, ಆತನಬಳಿ ಮಾತುಗಳೇ ಹೊರತು ಮದ್ದುಗಳು ವಿಶೇಷವಾಗಿ ಇಲ್ಲದುದರಿಂದ ಪದ್ಧತಿಪ್ರಕಾರ "ಲಂಘನಂ ಪರಮೌಷಧಂ" ಎಂಬ ಒಂದು ಸೂತ್ರವನ್ನೇ ಗತಿಯಾಗಿಟ್ಟುಕೊಂಡು ಲಂಘನಮಾಡಿಸಲಾರಂಭಿಸಿದನು. ಆತನು ನವಜ್ವರ ಪಕ್ವವಾಗಬೇಕೆಂದು ಹೇಳುತಿದ್ದರೂ ಲಕ್ಷ್ಯಮಾಡದೆ, ದಿನೇದಿನೇ ಕ್ರಮವಾಗಿ ರುಕ್ಮಿಣಿ ಶುಷ್ಕಿಸಿ ಹೋಗಿ ಅಷ್ಟಪಟ್ಟಕ್ಕೆ ಮತ್ತಷ್ಟು ಬಲಹೀನಳಾಗುತಿರುವುದನ್ನು ನೋಡಿ, ಆತನ ವೈದ್ಯವನ್ನು ಸಾಕುಮಾಡಿ,

ಮತ್ತೆ ಮೊದಲನೆಯ ವೈದ್ಯನನ್ನು ಕರೆಯಿಸಲು ಆತನು ಕೂಡಲೆ ಪಥ್ಯ ವನ್ನಿಡಿಸಿ ಔಷಧಸೇವನೆಯನ್ನು ಮಾಡಿಸಲಾರಂಭಿಸಿದನು. ಆಔಷಧ ಬಲದಿಂದ ವ್ಯಾಧಿ ಸ್ವಲ್ಪ ಹಿಂಮೆಟ್ಟಿದರೂ ಒಂದೇ ಪಟ್ಟನಲ್ಲಿ ನಿಶ್ಯೇಷ ವಾಗಲಿಲ್ಲ.

ಅಷ್ಟರಲ್ಲಿ ಮಾಣಿಕ್ಯಾಂಬೆ ಒಂದಾದಿವಾರದ ದಿವಸ ನಾಲ್ಕು ಗಳಿಗೆಗೆ ಬೆಳಗಾಗುವುದೆಂಬಷ್ಟರಲ್ಲೇ ಎದ್ದು ಸುಬ್ಬಮ್ಮನನ್ನು ಕರೆದುಕೊಂಡು ಯಾರೂ ಹೋಗುವುದಕ್ಕೆ ಮುಂಚೆಯೇ ತಾವು ಹೋಗಬೇಕೆಂದು ಮಗಳಮೇಲಿನ ಪ್ರೇಮದಿಂದ ತಾನೇ ಕೋರಲಮ್ಮನ ಗುಡಿಗೆ ಶರಣುಕೇಳುವುದಕ್ಕಾಗಿ ಹೋದಳು. ಆಗುಡಿಯ ಬಳಿಯಲ್ಲಿದ್ದ ಹೊಲೆಯಳು ಮಾಣಿಕ್ಯಾಂಬೆ ಧೂಪಹಾಕಿದ ತರುವಾಯ, ಇಷ್ಟದೇವತೆ ತನಗಾವೇಶವಾದಹಾಗೆ ಕಾಣಬಂದು, ತಾನು ರುಕ್ಮಿಣಿಯ ಗಂಡನೆಂದು ಹೇಳಿಕೊಂಡು, ಕಾಣದ ದೇಶದಲ್ಲಿ ದಿಕ್ಕುತಪ್ಪಿದ ಪಕ್ಷಿಯಂತೆ ಸತ್ತುಹೋದೆನೆಂದು ಅತ್ತುದೇ ಅಲ್ಲದೆ, ತಾನು ರುಕ್ಮಿಣಿಯ ಮೇಲಿನ ಮೋಹದಿಂದ ಬಂದೆನೆಂದೂ ಆಕೆಯನ್ನು ತನ್ನ ಹತ್ತಿರಕ್ಕೆ ತೆಗೆದುಕೊಂಡು ಹೋಗುವೆನೆಂದೂ ಹೇಳಿದಳು. ಆಸಂಗತಿಯನ್ನು ಕೇಳಿ ಮಾಣಿಕ್ಯಾಂಬೆಯೂ ಸುಬ್ಬಮ್ಮನೂ ಅಳತೊಡಗಿದರು. ಆವುದ್ರೇಕವು ಶಾಂತಿಹೊಂದಿದ ತರುವಾಯ ಅವರು ಆಹೊಲೆಯಳಿಗೆ ಸಮರ್ಪಿಸಬೇಕಾದುದನ್ನರ್ಪಿಸಿ ಮನೆಗೆ ಹೋದರು.

ರುಕ್ಮಿಣಿಗೂ ರಾತ್ರಿ ಕನಸಿನಲ್ಲೂ, ಹಗಲುಸಹಿತ ಕಣ್ಣುಮುಚ್ಚಿದಾಗಲೂ, ಗಂಡನು ಇದಿರಿಗೆ ಕಾಣಬರುತಿದ್ದನು. ಒಂದಾನೊಂದು ಸಾರಿ ಮಾತಾಡಿದಂತೆ ಸಹಿತ ಆಕೆಗೆ ಕೇಳಬಂದರೂ ಆಮಾತುಗಳನ್ನಾಕೆ ಗ್ರಹಿಸಿದವಳಾಗಲಿಲ್ಲ. ಆಕೆ ಒಂದಾನೊಂದು ದಿವಸ ನಿದ್ದೆ ಹೋಗುತ್ತಿರುವಾಗ ಎದೆಯಮೇಲೆ ಯಾರೋ ಹತ್ತಿ ಕುಳಿತುಕೊಂಡಂತೆ ನೆನೆದು ಅಬ್ಬರಿಸುತಿದ್ದಳು.

ಹೀಗಿರಲಾಗಿ ಒಂದುದಿವಸ ಹರಿಶಾಸ್ತ್ರಿಯವರು ವಿಕೃತಿವೇಷದಿಂದ ಪುನಃ ಬಂದು ರುಕ್ಮಿಣಿಯ ಕೈನೋಡಿ ಭೂತನಾಡಿಯಾಡುತಿದೆ ಎಂದು ಹೇಳಿದರು. ಬೈರಾಗಿಯ ಕೈಯಿಂದ ವಿಭೂತಿಯಿಡಿಸಿ ಹೊಟ್ಟೆ

ಯೊಳಕ್ಕೆ ತೀರ್ಥವನ್ನು ಕೊಡಿಸಿದರೂ ಅದರಿಂದ ರುಕ್ಮಿಣಿಗೇನೂ
ಗುಣವಾಗಲಿಲ್ಲ. ಒಂದುದಿವಸ ಒಬ್ಬ ಬುಡುಬುಡಿಕೆಯವನು ತಲೆಯ
ಮೇಲಿನ ಪಾಗಿಗೆ ಪಕ್ಷಿಯ ಗರಿಗಳನ್ನು ಸಿಕ್ಕಿಕೊಂಡು, ಬುಜದ
ಮೇಲೆ ಬೆತ್ತಗಳ ಕಟ್ಟನ್ನೂ ಬೆನ್ನಿನಮೇಲೆ ಬೆತ್ತಗಳಿಗೆ ತಗಲಾಡಗ
ಟ್ಟಿದ ದೊಡ್ಡ ಚಕ್ಕಳದ ಸಂಚಿಯನ್ನೂ ಹಾಕಿಕೊಂಡು ಬುಡುಬುಡಿ 5
ಕೆಯನ್ನಾಡಿಸುತ್ತ ಬಂದು, ಮಾಣಿಕ್ಯಾಂಬೆ ಅವನನ್ನು ಶಕುನಕೇಳಿ
ದಾಗ, ಶ್ಲೋಕಗಳನ್ನೂ ಬೊಂಬೆಗಳನ್ನೂ ಬರೆದಿದ್ದ ತಾಳೆಯೋಲೆಯ
ಪುಸ್ತಕವನ್ನು ನೋಡಿ, ನೀರಿಗೆ ಹೋಗಿದ್ದಾಗ ಒಂದುದಿನ ಅರಳಿಯ
ಮರದ ಮೇಲಿನಿಂದ ಒಂದು ಕಾಮಿನೀ ಗ್ರಹವು ಬಂದು ತಗಲಿತೆಂದೂ
ಇಳಿಯತೆಗೆದು ಹಾಕಿದರೆ ಹೋಗುವುದೆಂದೂ ಹೇಳಿ, ಒಂದು ಬೇರಿನ 10
ಚೂರನ್ನು ಕೊಟ್ಟು ಅದನ್ನು ಬೆಳ್ಳಿಯ ತಾಯಿತಿಯಲ್ಲಿಟ್ಟು ಕೈಗೆ
ಕಟ್ಟೆಂದು ಹೇಳಿ, ಒಂದು ರೂಪಾಯನ್ನು ಹೊಂದಿ ಹೊರಟು ಹೋ
ದನು. ಆಪ್ರಕಾರವಾಗಿ ಮಾಣಿಕ್ಯಾಂಬೆ ರುಕ್ಮಿಣಿಗೆ ಇಳಿಯತೆಗೆದರೂ
ಅದರಿಂದಲೂ ಫಲವೇನೂ ಕಾಣಬರಲಿಲ್ಲ. ಒಂದುದಿನ ಸುಬ್ಬಮ್ಮನ
ಮೇಲೆ ವೆಂಕಟೇಶ್ವರನು ಆವೇಶಬಂದು ಇದೆಲ್ಲಾ ತನ್ನ ಮಾಹಾತ್ಮ್ಯ 15
ವೆಂದೂ ಬೆಟ್ಟಕ್ಕೆ ಬಂದು ತನಗೆ ಸರ್ವಸ್ವವನ್ನೂ ಕೊಡುವೆನೆಂದು
ತಾಯಿ ಪ್ರಾರ್ಥನೆಮಾಡಿಕೊಂಡಪಕ್ಷದಲ್ಲಿ ಸರ್ವವೂ ನಿವೃತ್ತಿಯಾಗುವು
ದೆಂದೂ ಹೇಳಿದನು. ಆಪ್ರಕಾರವಾಗಿಯೇ ಮಾಡುವೆನೆಂದು ಮಾಣಿ
ಕ್ಯಾಂಬೆ ಪ್ರಾರ್ಥನೆಮಾಡಿಕೊಂಡು ತನ್ನೊಡವೆಗಳಲ್ಲೊಂದನ್ನು ಮುಡಿ
ಕಟ್ಟಿದಳಾದರೂ ಅದರಿಂದಲೂ ರುಕ್ಮಿಣಿಯ ದೇಹಸ್ಥಿತಿ ಅನುಕೂಲದಶೆಗೆ 20
ಬರಲಿಲ್ಲ. ಅಷ್ಟರಲ್ಲಿ ಹರಿಶಾಸ್ತ್ರಿಯವರು ಬಂದು ಈರಾತ್ರಿ ಹುಡುಗಿ
ಯಮೇಲೆ ದೆವ್ವ ಬರುವಂತೆ ಮಾಡಿ ಅದನ್ನು ಹೊರಡಿಸುತ್ತೇನೆಂದು
ಪ್ರತಿಜ್ಞೆಮಾಡಿ, ತಾವು ನಾಲ್ಕುಗಳಿಗೆಯ ಹೊತ್ತಿರುವಾಗಲೇ ಬಂದು
ಹಜಾರವನ್ನು ಸಾರಿಸಿ ಅದರ ತುಂಬ ಧೈರ್ಯಶಾಲಿಗಳಾದ ಪುರುಷರು
ನೋಡಿದರೂ ಭಯಪಡುವಂತೆ ಬಣ್ಣಬಣ್ಣದ ರಂಗವಲ್ಲಿಗಳಿಂದ ವಿಕೃತ 25
ವಾದ ಸ್ತ್ರೀವಿಗ್ರಹವನ್ನು ಹಾಕಿ ತಾವು ಸ್ನಾನಮಾಡಿ ಬಂದು ಜುಟ್ಟನ್ನು
ಬಿರಿಯಹಾಕಿಕೊಂಡು ಮುಖದಲ್ಲಿ ದೊಡ್ಡದಾಗಿ ಕುಂಕುಮದಬೊಟ್ಟು

ಸ್ನಿಟ್ಟುಕೊಂಡು, ರುಕ್ಮಿಣಿಗೂ ಸ್ನಾನಮಾಡಿಸಿ ಒದ್ದೆಯಬಟ್ಟೆ
ಯಲ್ಲೇ ಆದರಮೇಲೆ ಕುಳ್ಳಿರಿಸಿ ಮುಖಕ್ಕೆ ವಿಭೂತಿಯನ್ನು ಬಳಿದು
ಸುತ್ತೂ ಬಿಂದಿಗೆಗಳ ನಾದವನ್ನು ಮಾಡುವಂತೆ ಮನುಷ್ಯರನ್ನು
ನಿಯಮಿಸಿ ಇದಿರಾಗಿ ದೊಡ್ಡದೀಪಗಳನ್ನಿಡಿಸಿ, ಆರೋಗ್ಯವಾಗಿರುವರಿಗೆ
ಕೂಡ ಪೈತ್ಯೋದ್ರೇಕಮಾಡುವ ಧೂಪಗಳನ್ನು ಹಾಕುತ್ತ, ಸುತ್ತು
ಮುತ್ತಿನ ಮನೆಗಳ ಮಕ್ಕಳೆಲ್ಲರೂ ಅಂಜಿಕೊಳ್ಳುವಂತೆ "ಹ್ರಾಂ"
"ಹ್ರೀಂ" ಎಂದು ಗಟ್ಟಿಯಾಗಿ ಬೀಜಾಕ್ಷರಗಳನ್ನುಚ್ಚರಿಸುತ್ತ, ಕಣ್ಣು
ಡ್ಡುಗಳನ್ನು ಕೆಂಪಗೆ ಮಾಡಿಕೊಂಡು ಬೆತ್ತವನ್ನು ಹಿಡಿದುಕೊಂಡು
ಹೊಡೆಯಹೋಗುವನಂತೆ ರುಕ್ಮಿಣಿಯಮೇಲೆ ಕೈಯೆತ್ತಿ "ಇದ್ದ
ದ್ದಿದ್ದ ಹಾಗೆ ಹೇಳು" ಎಂದು ಕೂಗಿದರು. ಅದುವರೆಗೇ ದೇಹಸ್ಮೃತಿ
ತಪ್ಪಿಹೋಗಿ ವಿಕಾರವಾಗಿ ನೋಡುತಿದ್ದ ಆರುಕ್ಮಿಣಿಯು ತಾಯಿ ಶರಣು
ಕೇಳಬಂದು ಹೇಳಿದ್ದ ಪ್ರಕಾರವಾಗಿಯೇ ತಾನು ನೃಸಿಂಹಸ್ವಾಮಿ
ಯೆಂದೂ, ಭಾರ್ಯೆಯಮೇಲಿನ ಪ್ರೇಮದಿಂದ ಬಂದು ಆವಹಿಸಿದೇನೆಂದೂ,
ಆಕೆಯನ್ನು ತನ್ನ ಸಂಗಡಲೇ ಕರೆದುಕೊಂಡು ಹೋಗುವೆನೆಂದೂ
ಹೇಳಿದಳು. ಅಷ್ಟರೊಳಗೆ ಪೈತ್ಯೋದ್ರೇಕವಿಳಿಯುವಂತೆ ರುಕ್ಮಿ
ಣಿಯ ಮುಖಕ್ಕೇನೋ ಬಳಿದು ಆಕೆಗೆ ಜ್ಞಾನ ಬಂದಮೇಲೆ ಒಳಕ್ಕೆ
ಕರೆದುಕೊಂಡು ಹೋಗಿ ಶೈತ್ಯೋಪಚಾರಗಳನ್ನು ಮಾಡಿರೆಂದು ಹತ್ತಿ
ರಿದ್ದವರಿಗೆ ಹೇಳಿ, ಹರಿಶಾಸ್ತ್ರಿಯವರು ಮನೆಗೆ ಹೋದರು. ರುಕ್ಮಿಣಿ
ಆದಿನವೂ ಮಾರನೆಯದಿನವೂ ಮತ್ತಿನಿಂದ ಬಿದ್ದಿದ್ದಳು. ಮಾರನೆಯ
ದಿವಸ ಬೆಳಗ್ಗೆ ಹರಿಶಾಸ್ತ್ರಿಯವರು ಬಂದು ರುಕ್ಮಿಣಿಯನ್ನು ಹಿಡಿದಿರು
ವುದು ಮೊಂಡಗ್ರಹವೆಂದೂ, ಮಹಾಮಂತ್ರಗಳಿಂದಲ್ಲದೆ ಶಾಬರಗಳಿಂದ
ಸಾಧ್ಯವಲ್ಲವೆಂದೂ, ಆದರೂ ತಾನು ಮಾಡಿದ ತಪಸ್ಸನ್ನೆಲ್ಲಾ ಧಾರೆಯೆ
ರೆದು ಬಿಡಿಸುವೆನೆಂದೂ ಹೇಳಿ, ರಾತ್ರಿಗೆ ಒಂಭತ್ತು ಮೊಳದ ಹೊಸ
ವಸ್ತ್ರವನ್ನೂ ಅಖಂಡಕ್ಕೆ ಮಣತುಪ್ಪವನ್ನೂ ಹೂಗಳನ್ನೂ
ಆರುಮೊಳದ ನಾರಿನ ಹಗ್ಗವನ್ನೂ ನಾಲ್ಕು ಗೂಟಗಳನ್ನೂ ಎರಡು
ತಂಬಿಗೆಯ ನೀರು ಹಿಡಿಯುವ ಹಿತ್ತಳೆಯ ತಟ್ಟೆಯನ್ನೂ ಸಿದ್ಧಮಾಡಿಸಿ,
ಎರಡನೆಯ ದಾರಿಯಿಲ್ಲದ ಒಂದು ಕೊಠಡಿಯನ್ನು ಗೋಮಯದಿಂದ

ಸಾರಿಸಿ ಇಟ್ಟಿರಬೇಕೆಂದೂ ರಾಜಶೇಖರನಿಗೆ ಹೇಳಿ ಹೋದರು. ರಾಜ
ಶೇಖರನು ಆಪ್ರಕಾರವಾಗಿ ಸರ್ವವನ್ನೂ ಸಿದ್ಧಪಡಿಸಿ ಆತನ ಬರುವಿಕೆ
ಯನ್ನಿದಿರುನೋಡುತಿದ್ದನು. ಆತನು ರಾತ್ರಿ ಒಂಭತ್ತು ಘಂಟೆಯ
ಮೇಲೆ ಬಂದು ಕೊಠಡಿಯಲ್ಲಿ ಅಖಂಡವನ್ನು ಬೆಳಗಿಸಿ, ಅಮ್ಮನವರ
ಪೆಟ್ಟಿಗೆಯನ್ನು ಅದರ ಸಮೀಪದಲ್ಲಿಟ್ಟು ಅಕ್ಕಿಯ ಹಿಟ್ಟಿನಲ್ಲಿ ಕೊಠಡಿ 5
ಯಮಧ್ಯೇ ಚಿಕ್ಕದಾಗಿ ರಂಗವಲಿಯನ್ನಿಟ್ಟು ಅದರಮೇಲೆ ರುಕ್ಮಿಣಿ
ಯನ್ನು ಕುಳ್ಳಿರಿಸಿ ಕೊಂಚಹೊತ್ತು ತನ್ನಲ್ಲೇ ಏನೋ ಮಂತ್ರವನ್ನು
ಜಪಿಸಿ ದಿಗ್ಬಂಧನವನ್ನು ಮಾಡಿ ಕೊಠಡಿಯ ನಾಲ್ಕು ಮೂಲೆಗಳಲ್ಲೂ
ಮಂತ್ರೋದಕವನ್ನು ಚೆಲ್ಲಿ ರುಕ್ಮಿಣಿಯನ್ನು ಆಚೆಗೆ ಕರೆದುಕೊಂಡು
ಹೋಗಬಹುದೆಂದು ಹೇಳಿ, ಆಕೆಯನ್ನಾಚೆಗೆ ಕರೆದುಕೊಂಡು ಹೋದ 10
ತರುವಾಯ ಕೊಠಡಿಯ ಬಾಗಿಲಿಗೆ ಒಳಗಡೆ ಅಗಣಿಯನ್ನು ಹಾಕಿ
ಕೊಂಡು ಒಂದುಗಳಿಗೆಯಹೊತ್ತಿದ್ದು ಹೊರಕ್ಕೆ ಬಂದು ಬಾಗಿಲಿಗೆ
ಬೀಗವನ್ನು ಹಾಕಿ, ಅಗ್ರಹಕ್ಕೆ ಬದುಕಿದ್ದ ಕಾಲದಲ್ಲಿ ನೃಸಿಂಹಮಂತ್ರವು
ತಿಳಿದಿತ್ತಾದಕಾರಣ ಅದು ಯಾವ ದೇವತೆಗೂ ಒಳಪಟ್ಟಿದಲ್ಲವೆಂದೂ,
ತನ್ನ ಯಾವಶಕ್ತಿಯನ್ನೂ ವಿನಿಯೋಗಿಸಿ ಕೊಠಡಿಯನ್ನು ಬಿಟ್ಟು 15
ಬಾರದಹಾಗೆ ಮಾತ್ರ ಬಂಧಿಸಿ ಬಂದೆನೆಂದೂ, ತಾನು ಹೊರಗಿನಿಂದ
ಶರಭಸಾಳ್ವವನ್ನು ಪ್ರಯೋಗಿಸಿದಲ್ಲಿ ಘೋರಯುದ್ಧವನ್ನು ಮಾಡಿ
ಒಳಪಡುವುದಲ್ಲದೆ ಮತ್ತಾವವಿಧದಲ್ಲೂ ಒಳಪಡದೆಂದೂ ಹೇಳಿ,
"ಓಂ—ಖೇಂ—ಖಂ—ಫ್ರಸಿ—ಹುಂ—ಫಟ್—ಸರ್ವಶತ್ರುಸಂಹಾರಿಣೇ—ಶರಭ
ಸಾಳ್ವಾಯ—ಪಕ್ಷಿರಾಜಾಯ—ಹುಂ—ಫಟ್—ಸ್ವಾಹಾ" ಎಂದು ಶರಭಸಾ 20
ಳ್ವವನ್ನು ಪುನಶ್ಚರಣೆ ಮಾಡಲಾರಂಭಿಸಿದನು. ಎರಡುಸಾರಿ ಮಂತ್ರವ
ನ್ನುಚ್ಚಾರಣೆಮಾಡುವ ಹೊತ್ತಿಗೆ ಕೊಠಡಿಯಲ್ಲಿ ಒಬ್ಬ ಮನುಷ್ಯ
ನನ್ನು ಮತ್ತಾರೋ ಹೊಡೆಯುತ್ತಿರುವಂತೆ ಸಣ್ಣಸಣ್ಣ ದೆಬ್ಬೆಗಳು
ಕೇಳಬಂದುವು; ಆತರುವಾಯ ಒಂದು ದೊಡ್ಡ ದೆಬ್ಬೆಯು ಕೇಳ
ಬಂತು. ಈಪ್ರಕಾರವಾಗಿ ಅರ್ಧಗಳಿಗೆಯ ಹೊತ್ತು ದೆಬ್ಬೆಗಳು ಕೇಳಿ 25
ಸುತ್ತ ಬಂದು ಸದ್ದಡಗಿದ ತರುವಾಯ ಗ್ರಹವು ಸುಲಭವಾಗಿಯೇ ದೊರೆ
ಯಿತೆಂದೂ, ಅದನ್ನೀಗಲೇ ತೆಗೆದುಕೊಂಡು ಹೋಗಿ ಗೋದಾವರಿ

ಯಲ್ಲಿ ಕಳೆಯಿಸಿ ಬಿಡುವೆನೆಂದೂ ಹೇಳಿ, ತಾವೊಬ್ಬರೇ ಕೊಠಡಿಯೊ ಳಕ್ಕೆ ಹೋಗಿ ಅಲ್ಲಿನ ಸಮಸ್ತವಸ್ತುಗಳನ್ನೂ ತೆಗೆದುಕೊಂಡು ಹರಿ ಶಾಸ್ತ್ರಿಯವರು ಹೊರಟುಹೋದರು. ಆಮರುದಿನ ಮೊದಲ್ಗೊಂಡು ಕ್ರಮಕ್ರಮವಾಗಿ ರುಕ್ಮಿಣಿಗೆ ಕಾಯಿಲೆ ಕಡಮೆಯಾಗಿ ಆರೋಗ್ಯ ವನ್ನು ಹೊಂದಸಾಗಿದಳು. ತರುವಾಯ ಆಬ್ರಾಹ್ಮಣನು ಒಂದು ದಿನ ತಾಮ್ರದ ತಗಡಿನಮೇಲೆ ಒಂದು ಕಡೆಯಲ್ಲಿ ಆಂಜನೇಯ ವಿಗ್ರಹವನ್ನೂ ಬೀಜಾಕ್ಷರಗಳನ್ನೂ ಮತ್ತೊಂದು ಕಡೆ ಯಲ್ಲಿ ಹೇಗೆ ಕೂಡಿದರೂ ಮೂವತ್ತು ನಾಲ್ಕು ಬರುವಂತೆ ಹದಿನಾರು ಮನೆಗಳು ಳ್ಳ (ಈಪಕ್ಕದಲ್ಲಿರುವಂತೆ) ಯಂತ್ರವನ್ನು ಹಾಕಿ, ಆರಕ್ಷಾರೇಖೆಯನ್ನು ರುಕ್ಮಿಣಿಯ ಕೊರಳಿಗೆ ಕಟ್ಟಿ ಅದು ಇರುವವರೆಗೂ ಯಾವವಿಧವಾದ ಗಾಳಿಯೂ ಸೋಕದೆಂದು ಹೇಳಿ ದನು. ಮಗಳ ಗ್ರಹಬಾಧೆಯನ್ನು ನಿವಾರಣೆಮಾಡಿದುದಕ್ಕಾಗಿ ರಾಜ ಶೇಖರನು ಶಾಸ್ತ್ರಿಯವರಿಗೆ ಧೋತ್ರದ ಜತೆಯನ್ನು ಉಡುಗರೆಯಾಗಿ ಕೊಟ್ಟುದಲ್ಲದೆ ನೂರಹದಿನಾರುರೂಪಾಯಿಗಳನ್ನು ಬಹುಮಾನವಾಗಿ ಕೊಟ್ಟನು.

| ೧೦ | ೫ | ೧೬ | ೩ |
|---|---|---|---|
| ೧೫ | ೪ | ೯ | ೬ |
| ೧ | ೧೪ | ೭ | ೧೨ |
| ೮ | ೧೧ | ೨ | ೧೩ |

ಶಾಸ್ತ್ರಿಯವರು ಆರಾತ್ರಿ ಅಮ್ಮನವರ ಪೆಟ್ಟಿಗೆಯನ್ನು ತಂದಾಗ ಆದರಲ್ಲಿ ಹಾಕಿಕೊಂಡು ಕೆಲವು ಕಲ್ಲುಗಳನ್ನು ಮಾತ್ರ ತಂದುಕೊಂಡಿ ದ್ದರು. ಹೊರಕ್ಕೆಲ್ಲರನ್ನು ಕಳುಹಿಸಿಬಿಟ್ಟು ತಾವೊಬ್ಬರೇ ಒಳಗೆ ಕುಳಿ ತುಕೊಂಡಾಗ ಕದವನ್ನು ಹಾಕಿಕೊಂಡು ಕೊಠಡಿಯ ಮಣ್ಣುಮಾಳಿ ಗೆಯ ಮಧ್ಯದಲ್ಲಿ ಗೂಟಗಳನ್ನು ಹೊಡೆದು ಆಗೂಟಗಳಿಗೆ ನಾರಿನ ಹಗ್ಗವನ್ನು ಕಟ್ಟಿ, ಹೊಸಬಟ್ಟೆಯಲ್ಲಿ ಕೊಂಚತುಂಡನ್ನು ಹರಿದು ಅದಕ್ಕೆ ಕೊಂಚ ಕೊಂಚ ದೂರವಾಗಿ ಆಕಲ್ಲುಗಳನ್ನು ಗಂಟುಹಾಕಿ, ಬಟ್ಟೆಯನ್ನು ಚೆನ್ನಾಗಿ ತುಪ್ಪದಲ್ಲಿ ಮುಳುಗಿಸಿ, ಒಂದುಕೊನೆಯನ್ನು ನಾರಿನಹಗ್ಗಕ್ಕೆ ನೇತಾಡಗಟ್ಟಿ, ಅದಕ್ಕೆ ಸರಿಯಾಗಿ ಕೆಳಗಡೆ ನೆಲದಮೇ ಲಿಟ್ಟಿದ್ದ ತಟ್ಟೆಯತುಂಬ ನೀರನ್ನು ಹಾಕಿ ನೀರಲ್ಲಿ ಹೂವುಗಳನ್ನು

ಚೆನ್ನಾಗಿ ಹಾಸಿ, ಆ ಬಟ್ಟೆಯ ಕೊನೆಗೆ ದೀಪವನ್ನು ಹಚ್ಚಿ, ಹರಿಶಾಸ್ತ್ರಿ
ಯವರು ಹೊರಕ್ಕೆ ಬಂದರು. ಅವರೀಕಡೆಗೆ ಬಂದ ಎರಡುಮೂರು
ನಿಮಿಷಗಳಿಗೆಲ್ಲಾ ಬಟ್ಟೆಯು ಹತ್ತಿಕೊಂಡು, ಉರಿಯುತಿರುವ ಎಣ್ಣೆಯ
ಬೊಟ್ಟುಗಳು ನೀರಲ್ಲಿ ಬಿದ್ದು ಟಪ್ಪೆಂದು ಮನುಷ್ಯನಮೇಲೆ ದೆಬ್ಬೆಹಾಕಿ
ದಂತೆ ಶಬ್ದವಾಗುತ ಬಂತು. ಅನಂತರ ಕಲ್ಲುಗಳವರೆಗೂ ಸುಟ್ಟು 5
ಹೋದಾಗ ಆ ಕಲ್ಲು ನೀರಲ್ಲಿ ಬಿದ್ದು ದೊಡ್ಡ ಧ್ವನಿಯನ್ನು ಮಾಡುತ
ಬಂದರೂ ತಟ್ಟೆಯಲ್ಲಿ ಕೆಳಗೆ ಹೂಗಳಿದ್ದವಾದುದರಿಂದ ಹಿತ್ತಳೆಯ
ತಟ್ಟೆಯಮೇಲೆ ಹೊಡೆದಂತೆ ಎಷ್ಟುಮಾತ್ರವೂ ಕೇಳಬರಲಿಲ್ಲ. ಆ
ಬಟ್ಟೆಯೆಲ್ಲಾ ಸುಟ್ಟುಹೋದತರುವಾಯ ಅವರು ಒಳಕ್ಕೆ ಹೋಗಿ
ಮಸಿ ಮುಂತಾದುವನ್ನು ಪೂರ್ಣವಾಗಿ ಎತ್ತಿಕೊಂಡು ಹೋದರು. 10

ರಾಜಶೇಖರನು ಸುವರ್ಣವಿದ್ಯೆಯನ್ನು ಗ್ರಹಿಸಬೇಕೆಂಬಪೇಕ್ಷೆ
ಯಿಂದ ನಿತ್ಯವೂ ಬೈರಾಗಿಗೆ ಸಮಸ್ತೋಪಚಾರಗಳನ್ನು ನಡೆಯಿಸುತ್ತ,
ಆತನ ಸಮಯವನ್ನು ಕಂಡುಕೊಂಡು ಅನುಸರಿಸುತ್ತ, ಆತನೊಂದು
ದಿವಸ ಗಾಂಜಾಕುಡಿದು ಉಲ್ಲಾಸವಾಗಿ ಕುಳಿತುಕೊಂಡಿದ್ದಾಗ ಹತ್ತಿ
ರಕ್ಕೆ ಹೋಗಿ ವಿನಯದಿಂದ "ಬಾವಾಜೀ! ಲೋಕದಲ್ಲಿ ಸುವರ್ಣ 15
ಮಾಡುವ ವಿದ್ಯೆಯುಂಟೇ?" ಎಂದು ಕೇಳಿದನು. ಆತನು ಮಂದ
ಹಾಸದಿಂದ "ಇದೆ" ಎಂದು ಹೇಳಿದನು. ಆಮೇಲೆ ಮಾತಿನ
ಧೋರಣೆಯಿಂದ "ಆ ವಿದ್ಯೆಯ ಸಂಗತಿ ಎಂಥಾದ್ದು?" ಎಂದು ರಾಜ
ಶೇಖರನು ಮಹಾಭಕ್ತಿಶ್ರದ್ಧೆಯಿಂದ ಕೈಗಳನ್ನು ಜೋಡಿಸಿಕೊಂಡು
ಕೇಳಿದನು. ಅದರಮೇಲೆ ಆತನು "ಆ ಸಂಗತಿ ಪರಮರಹಸ್ಯವಾದು 20
ದಾದರೂ ನಿಮಗೆ ಹೇಳುವೆನು" ಎಂದೂ, ಪೂರ್ವಯುಗಗಳಲ್ಲಿ
ಸ್ಪರ್ಶವೇದಿಯಿಂದ ಕಬ್ಬಿಣವು ಚಿನ್ನವಾಗುತ್ತ ಬಂದುದಲ್ಲದೆ ಈ ಕಲಿ
ಯುಗದಲ್ಲಿ ಸ್ಪರ್ಶವೇದಿಯಿಲ್ಲವೆಂದೂ, ಪೂರ್ವದಲ್ಲಿ ಶಂಕರಾಚಾರ್ಯರು
ಒಬ್ಬ ಈಡಿಗರವನಿಗೆ ಸುವರ್ಣಮುಖಿ ಎಂಬ ವಿದ್ಯೆಯನ್ನುಪದೇಶಿ
ಸಲು ಅವನು ಚಿರಕಾಲ ಚಿನ್ನವನ್ನು ಮಾಡಿ ಕಡೆಗೆ ಯೋಗಿಗಳಲ್ಲಿ 25
ಸೇರಿ ಅವರಿಗುಪದೇಶಮಾಡಿ ದೇಹವನ್ನು ಬಿಟ್ಟನೆಂದೂ, ತನ್ನ ಗುರು
ಆ ವಿದ್ಯೆಯನ್ನು ತನಗುಪದೇಶಮಾಡಿದರೂ ಮಂತ್ರದ ಪುನಶ್ಚರಣೆಯು

ಪೂರ್ತಿಯಾಗಲಿಲ್ಲವಾದುದರಿಂದ ತನಗದಿನ್ನೂ ಫಲಿಸಿಲ್ಲವೆಂದೂ, ತಾನೀಗ ಹಸುರುಗಳಿಂದಮಾತ್ರ ಚಿನ್ನವನ್ನು ಮಾಡಬಲ್ಲೆನೆಂದೂ, ರಾಜಶೇಖರನಮೇಲಿನನುಗ್ರಹದಿಂದಲೇ ಹೇಳಿದಂತೆ ಹೇಳಿ, ಎಲ್ಲರೂ ಚಿನ್ನ ಮಾಡೆಂದು ತನ್ನನ್ನು ಬಾಧಿಸುತ್ತಾರೆಯಾದುದರಿಂದ ಆಸಂಗತಿಯನ್ನು 5 ಮಹಾರಹಸ್ಯವಾಗಿಡಬೇಕೆಂದು ಕೋರಿದನು. ರಾಜಶೇಖರನು ಆ ಪ್ರಕಾರ ಗೋಪ್ಯವಾಗಿಡುವೆನೆಂದು ಪ್ರಮಾಣಮಾಡಿ ತನಗೆ ಸುವರ್ಣ ಮಾಡುವ ಯೋಗವನ್ನು ಹೇಳಿರೆಂದು ಬಹುವಿಧವಾಗಿ ಪ್ರಾರ್ಥಿಸಿದನು. ಆದರಮೇಲೆ ಬೈರಾಗಿಯು ಅದನ್ನು ಗೃಹಸ್ಥರು ಮಾಡಬಾರದೆಂದೂ ಮಾಡಿದರೆ ವಂಶಕ್ಷಯವಾಗುವುದೆಂದೂ ಹೇಳಿ ತನ್ನಲ್ಲಿ ವಿಶ್ವಾಸವಿರು 10 ವರಿಗೆ ತಾನೇ ಚಿನ್ನವನ್ನು ಮಾಡಿಕೊಡುವೆನಲ್ಲದೆ ಯೋಗವನ್ನು ಹೇಳೆನೆಂದೂ ಹೇಳಿದನು.

ಆದರಮೇಲೆ ಚಿನ್ನವನ್ನಾದರೂ ಮಾಡಿಸಿಕೊಳ್ಳಬೇಕೆಂಬಾಶೆ ಹುಟ್ಟಿ, ಇನ್ನಿಷ್ಟು ಶ್ರದ್ಧಾಭಕ್ತಿಗಳಿಂದಾತನನ್ನಾಶ್ರಯಿಸುತ್ತ ಬಂದು ದಿನ ಬೆಳಗ್ಗೆ ರಾಜಶೇಖರನು ಹಾಲನ್ನೂ ಸಕ್ಕರೆಯನ್ನೂ ತೆಗೆದು 15 ಕೊಂಡುಬಂದು ಕೊಟ್ಟು ಕುಳಿತುಕೊಂಡಿರುವಾಗ, ಆಬೈರಾಗಿ ರಾಜಶೇಖರನಮೇಲೆ ತನಗೆ ಪರಿಪೂರ್ಣಾನುಗ್ರಹವುಂಟಾಗಿರುವಂತೆ ಮುಖಚಿಹ್ನೆಗಳಿಂದ ತೋರ್ಪಡಿಸುತ್ತ ಬಂದು ಬೇಳೆಯತೂಕದ ಚಿನ್ನವನ್ನೂ ಬಂದು ಬೇಳೆಯತೂಕದ ಬೆಳ್ಳಿಯನ್ನೂ ತಂದುಕೊಡೆಂದು ಕೇಳಿ, ಆತನು ತಂದುಕೊಟ್ಟ ತರುವಾಯ ಅವೆರಡನ್ನೂ ಬಂದು ಬಟ್ಟೆ 20 ಯಲ್ಲಿ ಕಟ್ಟಿ, ರಾಜಶೇಖರನ ಕಣ್ಣಿದಿರಾಗಿಯೇ ಬೆಂಕಿಯಲ್ಲಿ ಹಾಕಿ ಕೊಂಚಕಾಲವಿಟ್ಟಿದ್ದು ಬಂದು ಹಸುರನ್ನದರಮೇಲೆ ಹಿಂಡಿ ಕೊಂಚಹೊತ್ತು ತಾಳಿ, ಪಟಕಾರಿಯಿಂದ ತೆಗೆದು, ರಾಜಶೇಖರನ ಕೈಯಲ್ಲಿ ಎರಡು ಬೇಳೆಯ ತೂಕದ ಚಿನ್ನವನ್ನಿಟ್ಟನು. ಅನಂತರದಲ್ಲಿ ರಾಜಶೇಖರನು ಇನ್ನಿಷ್ಟು ಆಶೆಯುಳ್ಳವನಾಗಿ, ತನ್ನ ಮನೆಯಲ್ಲಿರುವ ಚಿನ್ನವನ್ನೂ 25 ಬೆಳ್ಳಿಯನ್ನೂ ಕಲಸಿ ಏಕವಾಗಿ ಚಿನ್ನವನ್ನು ಮಾಡಿರೆಂದು ಬಹುವಿಧವಾಗಿ ಬೇಡಿಕೊಂಡನು. ಹಾಗೆ ಬೇಡಿಬೇಡಿಕೊಳ್ಳುತ ಬರಲು ಗೋಸಾಯಿ ಆತನ ಪ್ರಾರ್ಥನೆಯನ್ನಂಗೀಕರಿಸಿ ಮನೆಯಲ್ಲಿರುವ ಚಿನ್ನ

ವನ್ನೂ ಬೆಳ್ಳಿಯನ್ನೂ ಸೇರಿಸಿ ಒಂದು ಗಂಟುಕಟ್ಟುವಂತೆ ನಿಯಮಿಸಿ
ದನು. ಆತನಾಜ್ಞಾನುಸಾರವಾಗಿ ರಾಜಶೇಖರನು ತನ್ನ ಮನೆಯಲ್ಲಿ
ರುವೆಲ್ಲರ ನಗಗಳನ್ನೂ ಬೆಳ್ಳಿಯಪಾತ್ರೆಗಳನ್ನೂ ಧನವನ್ನೂ ಕೂಡಿಸಿ
ಒಂದು ದೊಡ್ಡ ಗಂಟುಕಟ್ಟಿ ಮನೆಯವರು ಕೂಡ ಅರಿಯದಂತೆ ರಹ
ಸ್ಯವಾಗಿ ಬೈರಾಗಿಯ ಬಳಿಗೆ ತೆಗೆದುಕೊಂಡು ಬಂದನು. ಆತನು
ಕೂಡಲೇ ಬೆರಣಿಯತಾಳಿಯನ್ನಿಡಿಸಿ ಆ ಗಂಟನ್ನು ರಾಜಶೇಖರನ
ಕೈಯಿಂದಲೇ ಅದರಲ್ಲಿಡಿಸಿ ಪುಟಹಾಕಿ, ಆತನನ್ನು ಒಳಕ್ಕೆ ಹೋಗಿ
ಬೀಸಣಿಗೆಯನ್ನು ತೆಗೆದುಕೊಂಡು ಬಾ ಎಂದು ಕಳುಹಿಸಿದನು. ರಾಜ
ಶೇಖರನು ಬೀಸಣಿಗೆಯನ್ನು ತೆಗೆದುಕೊಂಡು ಮರಳಿ ಬರುವವರೆಗೆ
ಬೈರಾಗಿಯು ಕೊಳವಿಯಿಂದ ಊದುತಿದ್ದನು; ಬೆರಣಿಗಳ ಸಂದಿನಿಂದ
ಗಂಟೂ ಕಾಣುತಿತ್ತು. ಆಗ ಬೈರಾಗಿ ಮತ್ತೆ ಕೆಲವು ಬೆರಣಿಗಳನ್ನು
ಮೇಲೆ ಇಟ್ಟು ಉರಿಮಾಡಿ, ತಾನು ವೇಮಗಿರಿಬೆಟ್ಟದ ಮೇಲಿರುವ
ಮೂಲಿಕೆಗಳನ್ನು ತರುವುದಕ್ಕಾಗಿ ಹೊರಡುವೆನೆಂದೂ ತಾನು ಹೋಗಿ
ತರುವ ಹಸುರುಹಿಂಡಿದರಲ್ಲದೆ ಎಲ್ಲಾ ಚಿನ್ನವಾಗಲಾರದೆಂದೂ ತಾನು
ಬರುವವರೆಗೂ ಬೆರಣಿಗಳನ್ನು ಹಾಕಿ ಉರಿಹಾಕುತ ಜಾಗ್ರತೆಯಿಂದ
ನೋಡುತ್ತಿರಬೇಕೆಂದೂ ಹೇಳಿ, ಮೂಲಿಕೆಗಳ ನಿಮಿತ್ತವಾಗಿ ಹೊರ
ಟನು. ಆತನು ವನಮೂಲಿಕೆಗಳಿಗಾಗಿ ಹೋಗಿ ಎಷ್ಟು ಹೊತ್ತಿಗೂ
ಬಾರದೆ ಇದ್ದುದರಿಂದ ರಾಜಶೇಖರನು ತಾನಲ್ಲೇ ಇದ್ದು, ಬೈರಾಗಿ
ಯನ್ನು ಕರೆದುಕೊಂಡು ಬರುವುದಕ್ಕಾಗಿ ಮನುಷ್ಯರನ್ನು ಕಳುಹಿ
ದನು. ಅವರು ಬೆಟ್ಟವನ್ನೆಲ್ಲಾ ಹುಡುಕಿ ಎಲ್ಲಿಯೂ ಆತನ ಜಾಡೆಯ
ನ್ನು ಕಾಣದೆ ಮದ್ದಿನಗಿಡ ದೊರೆಯದೆ ಹೋದುದರಿಂದ ದೂರದ ಬೆಟ್ಟ
ಗಳಿಗೆ ಹೋಗಿದಾನೆಯೋ ಏನೋ ಎಂದುಕೊಂಡು ಮರಳಿಬಂದು ಆವಾ
ರ್ತೆಯನ್ನು ಹೇಳಿದರು. ಚಿನ್ನಮಾಡುವ ಮೂಲಿಕೆಗಳು ಸಿಕ್ಕದೆ
ಹೋದುದರಿಂದಲೇ ಇರಬಹುದು, ಬೈರಾಗಿ ಮರಳಿ ಬರಲೇ ಇಲ್ಲ.
ಆತನ ನಿಮಿತ್ತವಾಗಿ ಒಂದುದಿನದವರೆಗೂ ರಾಜಶೇಖರನು ಕಾಯ್ದಿದ್ದು
ಪುಟವನ್ನು ತೆಗೆದುನೋಡುವಾಗ್ಗೆ ಅದರಲ್ಲಿ ಚಿನ್ನವೂ ಬೆಳ್ಳಿಯೂ
ಇಲ್ಲದೆಹೋದರೂ ಬಿಳಿಯಭಸ್ಮಮಾತ್ರ ಇತ್ತು. ಸುಲಭವಾಗಿ ರಜತ

ಭಸ್ಮವೂ ಸುವರ್ಣಭಸ್ಮವೂ ಆದುದಕ್ಕಾಗಿ ರಾಜಶೇಖರನು ಸಂತೋ
ಷಿಸಿ ಭದ್ರವಾಗಿ ಬಚ್ಚಿಟ್ಟರೂ ಯಾವ ಕಾರಣದಿಂದಲೋ ಆಭಸ್ಮದಲ್ಲಿ
ಭಾರವೂ ಸುವರ್ಣಾದಿಭಸ್ಮಗಳಲ್ಲಿರುವ ಗುಣವೂ ಕಾಣಬರಲಿಲ್ಲ.

---

## ಏಳನೆಯ ಪ್ರಕರಣ.

ರಾಜಶೇಖರನ ಬಡತನ—ಸುಬ್ಬಮ್ಮನ ಮರಣ—ಬಂಧುಮಿತ್ರರ ಪ್ರವ
ರ್ತನೆ—ರಾಜಮಹೇಂದ್ರವರ ಪ್ರಯಾಣ—ಗ್ರಹಣ ಸ್ನಾನ.

ಮೊದಲು—ಶ್ಲೋ ॥ ಅಧಿವ್ಯಾಧಿಶತೈರ್ಜನಸ್ಯ ವಿವಿಧೈರಾರೋ
5 ಗ್ಯಮುನ್ಮೂಲ್ಯತೇ । ಲಕ್ಷ್ಮೀರ್ಯತ್ರ ಪತಂತಿ ತತ್ರವಿವೃತದ್ವಾರಾ ಇವ
ವ್ಯಾಪದಃ ॥ ಎಂದರೆ, ಧನವೇ ಆಪದಗಳಿಗೆಲ್ಲ ಮೂಲವೆಂದು ಬೋಧಿ
ಸುವ ವಚನಗಳನ್ನು ಕೇಳುವಾಗ ಪುರಾಣವೈರಾಗ್ಯವುಂಟಾಗಿ ರಾಜ
ಶೇಖರನು ದಾರಿದ್ರ್ಯವನ್ನು ಕೋರುತ್ತ ಬಂದನು. ಲಕ್ಷ್ಮಿಯಂತಲ್ಲದೆ
ಆಕೆಯ ಅಕ್ಕನು ಯಾವಾಗಲೂ ಆಶ್ರಿತಸುಲಭಳಾದುದರಿಂದ, ಆತನ
10 ಕೋರಿಕೆಯಪ್ರಕಾರ ದಾರಿದ್ರ್ಯದೇವತೆ ಕೂಡಲೇ ಪ್ರತ್ಯಕ್ಷವಾಗಿ
ಆತನಭಿಮತವನ್ನು ಸಿದ್ಧಿಸುವಂತೆ ಮಾಡಿದಳು. ಆದರೆ ಆತನು ಮೊದ
ಲೆಣಿಸಿದ್ದ ರೀತಿಯಲ್ಲಿ ಬಡತನವು ಅಷ್ಟು ಸುಖಕರವಾದುದಾಗಿ ಕಾಣಬ
ರಲಿಲ್ಲ. ಈಗ ಮೊದಲಿನಂತೆ ಕೊಡುವುದಕ್ಕೆ ಧನವಿಲ್ಲದೆ ಹೋದು
ದರಿಂದ, ಇದುವರೆಗೆ ಆತನನ್ನಿಂದ್ರನೆಂದೂ ಚಂದ್ರನೆಂದೂ ಹೊಗಳುತ್ತ
15 ಬಂದ ಸ್ತುತಿಪಾಠಕರೆಲ್ಲರೂ ಮೆಲ್ಲಮೆಲ್ಲಗೆ ಆತನನ್ನು ಬಿಟ್ಟು, ಆತನಿಂದ
ಧನಿಕರಾಗಿ ಬದುಕಿದವರಲ್ಲಿಗೆ ಹೋಗಸಾಗಿದರು. ಆದರೂ ಕೈನೀಡಿ
ಯಾಚಿಸಿದವರನ್ನು ಸುಮ್ಮನೆ ಹೋಗೆಂದು ಹೇಳಲಾರದೆ ರಾಜಶೇಖ
ರನು ಬಾಯಲ್ಲಿ ಇಲ್ಲವೆಂಬುದನ್ನು ಕೈಯಿಂದಲೇ ಇಲ್ಲವೆಂದು ಹೇಳುತ್ತ,
ತನಗಿರುವುದರಲ್ಲೇ ವೇಳೆಗೆ ಬಂದು ಕೇಳಿದವರಿಗೆ ಭೋಜನವನ್ನಿಡುತ್ತಿ
20 ದ್ದನು. ಆದರಿಂದ ಅತಿಥಿಗಳಿಷ್ಟುಬಡವರಾದರೆ ಅಷ್ಟು ಸಂತೋಷಿಸುತ್ತಿ
ದ್ದರಲ್ಲದೆ ಮೊದಲಿನಂತೆ ಔತನಕ್ಕೆ ಬಿಜಯಮಾಡುವ ಮಿತ್ರರಂತಹವ
ರಾರೂ ಈಗ ಸಂತೋಷಪಡೋಣವಿಲ್ಲದೆ ಹೋಯಿತು. ಈದಾನಧ
ರ್ಮಗಳಿಗೆ ಸಹಿತ ಕೊಂಚ ಧನ ಬೇಕಾಯಿತಾದುದರಿಂದ, ಮನೆಯ

ಲ್ಲಿದ್ದ ಹಿತ್ತಳೆಯ ಸಾಮಾನುಗಳನ್ನಡವಿಟ್ಟು ರಾಜಶೇಖರನು ಹಣತರು
ತಿದ್ದನು. ಅದರಿಂದ ದಿನೇದಿನೇ ಮನೆಯಲ್ಲಿದ್ದ ಸೊತ್ತು ಕಡಮೆಯಾಗಿ
ಕಾಪಾಡಬೇಕಾದ ಭಾರವು ತಗ್ಗುತಿತ್ತು. ಹೀಗೆ ಕೊಂಚಕಾಲ ಕಳೆದ
ಮೇಲೆ ಮನೆಯಲ್ಲಿದ್ದ ಜಂಗಮರೂಪವಾದ ಸೊತ್ತೆಲ್ಲಾ ಬುಟ್ಟಿಗಳಾ
ಗಿಯೂ ತಟ್ಟೆಗಳಾಗಿಯೂ ಮರದತುಂಡುಗಳಾಗಿಯೂ ಮಾರ್ಪಟ್ಟುವು. 5
ಆಗಕೂಡ ಯಾಚಿಸಿದವರ ಮನಸ್ಸಿಗೆ ನೋವುಂಟುಮಾಡಲಿಷ್ಟವಿಲ್ಲದೆ
ಆತನು ಮೊದಲು ಯಾವಾಗಲೂ ಅಸತ್ಯವೆಂಬಮಾತನ್ನರಿಯದವನಾ
ದರೂ ದರಿದ್ರದೇವತೆಯುಪದೇಶದಿಂದ ಧನದಾನಗಳಿಗೆ ಬದಲಾಗಿ
ವಾಗ್ದಾನಗಳನ್ನುಮಾತ್ರ ಮಾಡಲಾರಂಭಿಸಿದನು. ಆಹಾ! ಮನು
ಷ್ಯರಿಂದ ದುಷ್ಕಾರ್ಯಗಳನ್ನು ಮಾಡಿಸುವುದರಲ್ಲಿ ದಾರಿದ್ರ್ಯವನ್ನು ಮಿಂಚಿ 10
ದುದು ಮತ್ತಾವುದೂ ಇಲ್ಲವಷ್ಟೆ? ಆತನು ಈಪ್ರಕಾರವಾಗಿ ಸರ್ವವಿ
ಧಗಳಿಂದಲೂ ಬಾಧೆಪಡುತಿದ್ದರೂ ಆಸಂಗತಿಯನ್ನೊಬ್ಬರೂ ಅರಿಯ
ದಂತಿರುವುದಕ್ಕಾಗಿ ಭೋಜನಪದಾರ್ಥಗಳಲ್ಲಿ ಕಡಮೆಮಾಡಿಯಾದರೂ
ಬಿಳಿಯ ಬಟ್ಟೆಗಳನ್ನುಟ್ಟುಕೊಳ್ಳುತ್ತ, ಸಾಲಮಾಡಿಯಾದರೂ ಬಡಬ
ಗ್ಗರಿಗೆ ಕೊಡುತ ಹೊರಕ್ಕೊಂದುರೀತಿಯಾದ ವೇಷದಿಂದ ಪ್ರವರ್ತಿಸು 15
ತಿದ್ದನು. ಅದಾವ ಮಾಯೆಯೋ! ಲೋಕದಲ್ಲೆಲ್ಲರೂ ತಾವು ಸುಖ
ಪಡುವುದಕ್ಕಾಗಿ ತೆಗೆದುಕೊಳ್ಳುವುದಕ್ಕಿಂತ ತಾವು ಸುಖವನ್ನನುಭವಿಸು
ತಿರುವಂತೆ ಇತರರಿಗೆ ಕಾಣುವಂತೆ ಮಾಡುವುದಕ್ಕಾಗಿ ವಿಶೇಷಶ್ರದ್ಧೆ
ಯನ್ನು ತೆಗೆದುಕೊಳ್ಳುವರು. ಬಡತನದಿಂದುಂಟಾಗುವ ಸೌಖ್ಯಗಳ
ನ್ನೂ ಲಾಭಗಳನ್ನೂ ವೇದಾಂತಗ್ರಂಥಗಳು ವರ್ಣಿಸಿ ಹೇಳುತ್ತ ಧನವು 20
ಪಾಪಕ್ಕೆ ಮೂಲವೆಂದು ದೂಷಿಸುತಿದ್ದರೂ ರಾಜಶೇಖರನು ಮಾತ್ರ
ಮನಸ್ಸಿನಲ್ಲಿ ಈದಾರಿದ್ರ್ಯದೇವತೆ ಯಾವಾಗ ತೊಲಗುವುದೋ ಎಂದು
ನಿಮಿಷವನ್ನೊಂದು ಯುಗವಾಗಿ ಕಳೆಯುತಿದ್ದನು; ಆದುದರಿಂದ ಆತನಿ
ದುವರೆಗೂ ಲಕ್ಷ್ಯದಿಂದ ನೋಡದ ಅದೃಷ್ಟದೇವತೆಯನ್ನೀಗ
ಮತ್ತಷ್ಟು ಪ್ರಾರ್ಥಿಸಸಾಗಿದನು. ಆಕೆಯನ್ನಾತನೆಷ್ಟಾಶೆಪಟ್ಟು 25
ಬೇಡುತ ಬಂದನೊ ಆ ಅದೃಷ್ಟದೇವತೆಯೂ ಅಷ್ಟುದೂರವಾಗಿ ತೊಲ
ಗುವುದಕ್ಕಾರಂಭಿಸಿದಳು.

ಅಂತಹ ಸಮಯದಲ್ಲೇ ಸುಬ್ಬಮ್ಮನಿಗೆ ರೋಗ ತಿರುಗಿಬಿತ್ತು. ದುಡ್ಡಿಲ್ಲದೆ ತೊಂದರೆಪಡುತಿದ್ದ ಸಮಯದಲ್ಲೇ ಉಪವಾಸಗಳನ್ನು ಮಾಡಿ ದಿನಕ್ಕಿಪ್ಪತ್ತುಸಾರಿ ಸ್ನಾನಗಳನ್ನು ಮಾಡಿ ಒದ್ದೆಬಟ್ಟೆಗಳನ್ನು ಟ್ಟುಕೊಂಡು ರೋಗದಲ್ಲಿ ಬಿದ್ದು ಹೆಚ್ಚುಕರ್ಚನ್ನು ತಂದಿಟ್ಟುದಕ್ಕಾಗಿ ಆಕೆಯಮೇಲೆ ಎಷ್ಟೋಕೋಪಬಂದು ರಾಜಶೇಖರನು ಕೊಸರಿಕೊಳ್ಳುತಿರುವಾಗ, ಕೆಲಸದನಿಮಿತ್ತವಾಗಿಬಂದು ತಿರುಗಿ ಹೋಗುತಿದ್ದ ಬ್ರಾಹ್ಮಣನೊಬ್ಬನು ಹತ್ತಿರದಲ್ಲಿದ್ದು ಕೇಳಿ ಆಕೆಯನ್ನುದೂಷಿಸಿದರೆ ಲಾಭವಿಲ್ಲವೆಂದು ಹೇಳಿ ತಾನಡಿಗೆಯವನಾಗಿರುವೆನೆಂದೂ ಆಕೆ ಮನೆಸ್ಸುಬಂದಷ್ಟು ದಿನಗಳು ಮಲಗಿರಲಿಯೆಂದೂ ಹೇಳದುದೇ ಅಲ್ಲದೆ ಅಡಿಗೆಗೆ ನಳಭೀಮಪಾಕಗಳನ್ನು ಮಿಂಚುವಂತೆ ಮಾಡುವ ತಾನಿರುವುದರಿಂದ ಆಕೆ ಇಷ್ಟಬಂದಕಡೆ ಮೃತಿಹೊಂದಿದರೂ ಹೊಂದಬಹುದೆಂಬಭಿಪ್ರಾಯವನ್ನು ಸಹಿತ ಸೂಚನೆಯಾಗಿ ತೋರಿಸಿದನು. ಆತನದು ಎಂತಹ ಸತ್ಯವಾಕ್ಯೋ! ಆದಿನ ಮೊದಲ್ಗೊಂಡು ತಕ್ಕ ವೈದ್ಯನಿಲ್ಲದುದರಿಂದಲೋ ಆಬ್ರಾಹ್ಮಣನೇ ಪಥ್ಯಪಾನಗಳನ್ನು ನಡೆಯಿಸುತಬಂದುದರಿಂದಲೋ ವ್ಯಾಧಿ ಪ್ರಬಲಿಸಿ ಬಂದುದಿನ ಆಕೆಗೆ ಪ್ರಾಣವು ಮೇಲಕ್ಕೆ ಬಂತು. ಆದಿನ ನಕ್ಷತ್ರವು ಕೆಟ್ಟದೆಂದು ಪುರೋಹಿತನು ಹೇಳದುದರಿಂದ, ಆಕೆಯನ್ನು ಬೀದಿಗೆ ಕೊಂಡುಹೋಗಿ ಗೋಡೆಯಪಕ್ಕದಲ್ಲಿ ಭೂಶಯನಮಾಡಿಸಿ ಬಂದುಚಾಪೆಯನ್ನಡ್ಡವಾಗಿಟ್ಟರು. ಆಕೆ ರಾತ್ರಿ ಜಾವಹೊತ್ತಾದ ತರುವಾಯ ಲೋಕಾಂತರಗತಳಾದಳು. ಬೆಳಗಾಗುವವರೆಗೂ ಆರಾತ್ರಿ ಮನೆಯವರೆಲ್ಲರೂ ಹೆಣದ ಸಮೀಪದಲ್ಲಿ ಜಾಗರಣೆಮಾಡಿದರು. ಮಾರನೆಯದಿನ ಪ್ರಾತಃಕಾಲದಿಂದ ಸಮಸ್ತ ಪ್ರಯತ್ನಗಳನ್ನು ಮಾಡಿದರೂ ಊರಲ್ಲಿದ್ದ ಬ್ರಾಹ್ಮಣರಲ್ಲಾರೂ ಸಹಾಯಕ್ಕೆಬರಲಿಲ್ಲ; ರಾಜಶೇಖರನು ತಾನೇ ಹೋಗಿ ಸೂಳೆಯಮನೆಯಲ್ಲಿ ಕುಳಿತಿದ್ದ ಹೆಣಹೊರುವ ವಿಸ್ಸನ್ನನನ್ನು ಕಂಡು ಸಂಗತಿಯನ್ನು ತಿಳಿಸಿದಾಗ, ಅವನು ಬೇರಗಳಗಾರಂಭಿಸಿ ಹದಿನಾರು ರೂಪಾಯಿಗಳಿಗೆ ಶವವನ್ನು ಹೊತ್ತು ಹಾಕುವುದಕ್ಕೊಪ್ಪಿಕೊಂಡು ಎದ್ದುಬಂದನು. ಈಗ ಕೂಡ ಆಂಧ್ರದೇಶದ ಬ್ರಾಹ್ಮಣರಲ್ಲಿ, ಮುಖ್ಯವಾಗಿ ಸ್ಮಾರ್ತರಲ್ಲಿ,

ಯಾರಮನೆಯಲ್ಲಾದರೂ ಆರಾದರೂ ಮೃತಿಹೊಂದಿದಾಗ ಬಂಧುಗಳೂ ಕುಲದವರೂ ಇತರಮತಗಳಲ್ಲಿರುವಂತೆ ತಾವಾಗಿಯೇ ಬಂದು ಸಹಾಯ ಮಾಡುವುದು ಇಲ್ಲದಿದ್ದರೂ ಬಂದು ಪ್ರಾರ್ಥಿಸಿದರೂ ಬಾರದೆ ನೆವಗಳನ್ನು ಹೇಳುತ್ತ ಮುಖವನ್ನು ತಪ್ಪಿಸಿಕೊಳ್ಳುವುದು ಬ್ರಾಹ್ಮಣಜಾತಿಗೆಲ್ಲಾ ಅಪಮಾನಕರವಾಗಿದೆ. ಸಮಸ್ತಾಪದಗಳಲ್ಲೂ ಘೋರತಮವಾದ ಈಯಾಪದಕ್ಕೇ ಯಾರೂ ಸಹಾಯವಾಗದಾಗ ಆಮತದಲ್ಲಿರುವುದರಿಂದೇನು ಪ್ರಯೋಜನ? ಇರದಿದ್ದರೆ ಹಾನಿಯೇನು? ಆದಿವಸ ಶವವು ಮನೆಯಿಂದ ಹೊರಡುವ ಹೊತ್ತಿಗೆ ಹಗಲು ಎರಡು ಜಾವವಾಯಿತು; ದಹನಮಾಡಿ ಮರಳಿ ಬರುವವರೆಗೆ ಪಡುವಲಲ್ಲಿ ನಾಲ್ಕುಗಳಿಗೆ ಯುಹೊತ್ತುಮಾತ್ರವಿತ್ತು. ತರುವಾಯ ವಿಧ್ಯುಕ್ತವಾಗಿ ಸಂಚಯನ ಮೊದಲಾದ ಅಪರಕರ್ಮಗಳೆಲ್ಲಾ ನಡೆದುವು.

ಮೊದಲಿನಂತೆ ರಾಜಶೇಖರನನ್ನು ನೋಡುವುದಕ್ಕಾಗಿ ಬಂಧುಗಳೂ ಮಿತ್ರರೂ ಅಷ್ಟಾಗಿ ಬರುವುದನ್ನು ಬಿಟ್ಟರು; ಬೀದಿಯಲ್ಲಿ ಕಂಡಾಗ ಕೂಡ ನೋಡದಂತೆ ತೊಲಗಿ ಹೋಗುವುದಕ್ಕೆ ಪ್ರಯತ್ನಿಸುತ್ತ, ವಿಧಿಯಿಲ್ಲದೆ ಕಲೆತು ಮಾತಾಡುವಾಗ ಸಂಗ್ರಹವಾಗಿ ಎರಡು ಮೂರು ಮಾತುಗಳಿಂದಲೇ ಸರಿಮಾಡುತ ಬಂದರು. ಪೂರ್ವದಲ್ಲಿ ಆತನು ಮಾತಾಡುವಾಗೆಲ್ಲ ಮುಖಸ್ತುತಿಮಾಡುತಿದ್ದವರು ಈಗ ಸಮ್ಮತಿಯನ್ನು ಸೂಚಿಸುವ ಶಿರಃಕಂಪನಗಳನ್ನು ಮಾತ್ರ ಮಾಡುತ, ಆತನ ಮಾತುಗಳನ್ನು ಮಂದಹಾಸದಿಂದ ಕೇಳಸಾಗಿದರು; ಕೆಲವು ದಿನಗಳಗಾಶಿರಃಕಂಪನಗಳೂ ಮಂದಹಾಸಗಳೂ ಹೋಗಿ ಸುಮ್ಮನೆ ಹೂಗುಟ್ಟುವುದು ಮಾತ್ರ ನಿಂತಿತು; ಆಮೇಲೆ ಆಹೂಗುಟ್ಟುವುದೂ ಹೋಗಿ ಹಿತಬೋಧನೆಗಳು ಬಲಿತುವು; ಕಾಲಕ್ರಮದಿಂದ ಹಿತಬೋಧನೆಗಳು ಸಹಿತ ಮುಳುಗಿಹೋಗಿ ಬಂದುರೀತಿ ಪರಿಹಾಸಗಳಾಗಿ ಪರಿಣಮಿಸಿದುವು. ರಾಜಶೇಖರನೂ ದಾರಪುತ್ರಾದಿಗಳೂ ಧನವಿಲ್ಲದವರಾದರೂ ತಾವು ಬಂದು ದುಷ್ಕಾರ್ಯಕ್ಕಾಗಿಯಾದರೂ ಧನವನ್ನು ದುರ್ವಿನಿಯೋಗಮಾಡಲಿಲ್ಲವಲ್ಲಾ ಎಂದು ಮನಸ್ಸಿನಲ್ಲೊಂದು ವಿಧವಾದ ಧೈರ್ಯವನ್ನವಲಂಬಿಸಿ, ಇದ್ದಷ್ಟರಲ್ಲೇ ತೃಪ್ತಿವಹಿಸಿ

ಇರಲು, ಆವರ ಸೌಖ್ಯವನ್ನು ನೋಡಿ ತಾಳಲಾರದ ಕೆಲವರು ಮಿತ್ರ
ರೆಂದು ಹೆಸರಿಟ್ಟುಕೊಂಡುಬಂದು, ಅವರೂ ಇವರೂ ನಿಮ್ಮನ್ನು ಗೂಷಿ
ಸುತಿದಾರೆಂದು ಹೇಳಿ, ಅವರ ಸ್ವಸ್ಥತೆಗೆ ಭಂಗವನ್ನುಂಟುಮಾಡುತ
ಬಂದರು ; ರಾಜಶೇಖರನು ಮಾಡಿದ ವ್ಯಯವನ್ನು ಮೊದಲು ದಾತೃತ್ವ
5 ವೆಂದು ಸಾವಿರನಾಲಗೆಗಳಿಂದ ಹೊಗಳಿದವರೇ ಈಗ ಅದನ್ನು ದುರ್ವಿ
ನಿಯೋಗವೆಂದು ನಿಂದಿಸಸಾಗಿದರು ; ಆತನಿಂದ ಪೂರ್ವದಲ್ಲೆಷ್ಟು
ವಿಧಗಳಲ್ಲೋ ಲಾಭವನ್ನು ಹೊಂದಿದವರುಕೂಡ ರಾಜಶೇಖರನು
ಬೀದಿಯಲ್ಲಿ ಹೋಗುವಾಗ ಬೆರಳಿನಿಂದ ತೋರಿಸಿ ಈತನೇ ತನ್ನ ಹಣ
ವೆಲ್ಲವನ್ನೂ ಹಾಳುಮಾಡಿಕೊಂಡು ಜೋಗಿಯಾದ ಮಹಾನುಭಾವ
10 ನೆಂದು ಹತ್ತಿರಿದ್ದವರಸಂಗಡ ಹೇಳಿ ನಗುವುದಕ್ಕೆ ಮೊದಲಿಟ್ಟರು.
ಇದುವರೆಗೂ ಸೀತೆಯನ್ನು ತನ್ನ ಕುಮಾರನಿಗೆ ಕೊಡಿರೆಂದು ನಿರ್ಬಂ
ಧಿಸುತಬಂದ ದಾಮೋದರಯ್ಯನು ಈಗ ಆಹುಡುಗಿಯನ್ನು ತನ್ನ
ಮಗನಿಗೆ ಮಾಡಿಕೊಳ್ಳನೆಂದು ಅವರಿವರಮುಂದೆ ಹೇಳತೊಡಗಿದನು ;
ಆಸಂಗತಿ ಕರ್ಣಪರಂಪರೆಯಾಗಿ ರಾಜಶೇಖರನವರೆಗೂ ಬಂದುದ
15 ರಿಂದ, ಆತನು ಬಂದುದಿನ ಹೋಗಿಕೇಳಲು ದಾಮೋದರಯ್ಯನು ತಾನೀ
ಸಂವತ್ಸರ ವಿವಾಹಮಾಡೆನೆಂದು ಹೇಳಿದನು. ಸುಬ್ರಹ್ಮಣ್ಯನಷ್ಟದೃ
ಷ್ಟವಂತನು ಲೋಕದಲ್ಲಾರೂ ಇಲ್ಲವೆಂದು ಜಾತಕಬರೆದ ಸಿದ್ಧಾ
ನ್ತಿಯೇ ಆತನಿಗೆ ಕನ್ಯೆಯನ್ನು ಕೊಡುವೆವೆಂದವರ ಮನೆಗೆ ಹೋಗಿ,
ತಾನು ನೋಡಿದುವುಗಳಲ್ಲೆಲ್ಲಾ ಆತನದೇ ಕೆಟ್ಟಜಾತಕವೆಂದು ಹೇಳಿ,
20 ಕನ್ಯೆಯನ್ನು ಕೊಡದಂತೆ ಮಾಡಿದನು. ರಾಜಶೇಖರನು ಧನವಿಲ್ಲದೆ
ಬಾಧೆಪಡುತಿದ್ದರೂ ಒಬ್ಬರನ್ನು ಕೇಳುವುದಕ್ಕಿಷ್ಟವಿಲ್ಲದೆ ಸುಮ್ಮನಿರ
ಲಾಗಿ, ನಿಜವಾದ ಮಿತ್ರನೊಬ್ಬನಾದರೂ ಇರದೆ ಹೋಗುವನೇ ಎಂದು
ಮಾಣಿಕ್ಯಾಂಬೆಯೂ ಸುಬ್ರಹ್ಮಣ್ಯನೂ ರಾಜಶೇಖರನ ಹತ್ತಿರಕ್ಕೆ
ಹೋಗಿ, ನಾರಾಯಣಮೂರ್ತಿಯನ್ನಾದರೂ ಮತ್ತಾರನ್ನಾದರೂ ಸಾಲ
25 ಕೇಳಿ ಸುಬ್ಬಮ್ಮನ ಮಾಸಿಕಕ್ಕಾಗಿ ಎಷ್ಟಾದರೂ ಹಣವನ್ನು ತೆಗೆದು
ಕೊಂಡು ಬನ್ನಿರೆಂದು ಪ್ರಾರ್ಥಿಸಿದರು. ಆತನು ಅವರ ಮಾತನ್ನು
ತೆಗೆದುಹಾಕಲಾರದೆ ದಾಮೋದರಯ್ಯನನ್ನೂ ನಾರಾಯಣಮೂರ್ತಿ

ಯನ್ನೂ ಮಿತ್ರರಂತೆ ನಟಿಸಿ ತನ್ನಿಂದ ಲಾಭವನ್ನು ಹೊಂದಿದ್ದ ಮತ್ತೆ
ಕೆಲವರನ್ನೂ ಸಾಲಕೇಳನೋಡಿದನಾದರೂ, ಅಕ್ಕರೆಯಿಲ್ಲದಾಗ ನಾವು
ಸಾಲಕೊಡುವೆವು ನಾವು ಸಾಲಕೊಡುವೆವೆಂದು ಸಂತೋಷಪೂರ್ವಕ
ವಾಗಿ ಹೇಳುತಿದ್ದವರು ಈಗ ನಿಜವಾಗಿ ಬೇಕಾಗಿ ಬಂದಿರುವುದರಿಂದ
ಹೋಗಿ ಕೇಳಿದರೂ ಸಾವಿರ ಕ್ಷಮಾಪಣೆಗಳನ್ನು ಹೇಳಿ ವಿಚಾರದಿಂದ 5
ತಮ್ಮಲ್ಲಿಲ್ಲವೆಂದರು. ಹಲವರು ರಾಜಶೇಖರನ ಮನೆಗೆ ಬರುವುದನ್ನು
ಬಿಟ್ಟರೂ ಕೊಂಚಕಾಲದವರೆಗೂ ಬರುತಿದ್ದ ಕೆಲಬರು ತಮ್ಮನ್ನೇ
ನಾದರೂ ಋಣಕೇಳುವನೇನೋ ಎಂದು ಈಗ ಆ ಬರುವುದನ್ನು ಕೂಡ
ಬಿಟ್ಟರು. ಆದುದರಿಂದ ಮೊದಲಾವಾಗಲೂ ಮನುಷ್ಯರಿಂದ ತುಂಬಿದ್ದು
ರಣಗುಣಧ್ವನಿಯುಂಟಾಗಿದ್ದ ರಾಜಶೇಖರನ ಗೃಹವು ಈಗ ತುಳಿದು 10
ನೋಡುವರಿಲ್ಲದೆ ನಿಶ್ಶಬ್ದವಾಗಿತ್ತು. ಆದರೆ ಯಥಾಸ್ಥಿತಿಯಲ್ಲೇ ಚಿರ
ಕಾಲವಿರಲಿಲ್ಲ; ಆದರ ಸ್ತಂಭಮುಹೂರ್ತಬಲವೆಂಥದೊ! ತರುವಾಯ
ಮರಳಿ ಸದಾ ಮನುಷ್ಯರಿಂದ ತುಂಬಿ ಮೊದಲಿಗಿಂತ ಸಮ್ಮರ್ದವುಳ್ಳು
ದಾಗಿ ಬಹುಜನಧ್ವನಿಗಳಿಂದ ಮೊರೆಯುತಿತ್ತು. ಮೊದಲು ಮನಸ್ಸಿ
ನಲ್ಲೊಂದನ್ನಿಟ್ಟುಕೊಂಡು ಮೇಲಕ್ಕೊಂದನ್ನು ಹೇಳುತ್ತ ಕಪಟವಾಗಿ 15
ಪ್ರವರ್ತಿಸುವರಿಂದಲೂ ಬಟ್ಟೆಕೊಡಿರೆಂದೂ ಕೂಳಿಡಿರೆಂದೂ ಯಾಚಿ
ಸುವ ದರಿದ್ರರಿಂದಲೂ ತುಂಬಿತ್ತು; ಈಗ ಮನಸ್ಸಿನಲ್ಲಿರುವುದನ್ನೇ
ನಿರ್ಭಯವಾಗಿ ಮುಖದಮುಂದೆ ಹೇಳುವ ಋಜುವರ್ತನೆಯುಳ್ಳವ
ರಿಂದಲೂ ಬಟ್ಟೆಗಳನ್ನು ಭೋಜನಪದಾರ್ಥಗಳನ್ನು ಕೊಂಡುದಕ್ಕಾಗಿ
ಕೊಡಬೇಕಾದ ಹಣವನ್ನು ಕೊಡಿರೆಂದು ಅಧಿಕಾರವನ್ನು ತೋರಿಸುವ 20
ಭಾಗ್ಯವಂತರಿಂದಲೂ ತುಂಬಿರಲಾರಂಭಿಸಿತು. ಗೃಹಕ್ಕೆ ಮನುಷ್ಯ
ಸಮೃದ್ಧಿಯುಂಟಾದ ಹಾಗೆಯೇ ರಾಜಶೇಖರನಿಗೆ ವಸ್ತುಸಮೃದ್ಧಿಯೂ
ದಿನದಿನಕ್ಕಧಿಕವಾಗಾಗುತ ಬಂತು. ಮೊದಲಿನಂತೆ ಹಗಲುಹೊತ್ತು
ಪದಾರ್ಥಸಂದರ್ಶನವು ಹೆಚ್ಚಾಗಿಲ್ಲದಿದ್ದರೂ ತದೇಕಧ್ಯಾನದಲ್ಲಿದ್ದುದ
ರಿಂದ ರಾತ್ರಿ ಕನಸಿನಲ್ಲಿಮಾತ್ರ ಸಹಸ್ರಗುಣಾಧಿಕವಾಗಿ ಉಂಟಾಗು 25
ತಿತ್ತು. ಆಬಾಧೆಗಳು ಹಾಗಿರಲಾಗಿ ರುಕ್ಮಿಣಿಯು ಶಿರೋಜಗಳನ್ನು
ತೆಗಿಸದಿರುವುದೇ ಚೆನ್ನಾಗಿದೆಯೆಂದು ಶ್ಲಾಘಿಸಿದ ಶ್ರೋತ್ರಿಯರೇ ಈಗ

ಆತನನ್ನು ಹಲವುವಿಧವಾಗಿ ದೂಷಿಸುವುದಲ್ಲದೆ ಸಭೆಯವರಿಗೆ ನೂರು
ರೂಪಾಯಿಗಳಪರಾಧವನ್ನು ಸಮರ್ಪಿಸದಿದ್ದರೆ ಶ್ರೀಶಂಕರಾಚಾರ್ಯಗು
ರುಸ್ವಾಮಿಗಳಿಗೆ ಬರೆದು ಜಾತಿಯಿಂದ ಹೊರಗೆ ಹಾಕಿಸುವೆವೆಂದು ಹೆದ
ರಿಸತೊಡಗಿದರು. ಋಣಪ್ರದಾತರಿಂದ ತುಂಬಿ ಮನೆ ಬಂದಡವಿಯಾ
5 ಗಿದ್ದುದರಿಂದಲೂ, ಬೀದಿಯೊಳಕ್ಕೆ ಹೋದರೆ ಸುಗುಣಗಳನ್ನು ಕೂಡ
ದುರ್ಗುಣಗಳಾಗಿಯೇ ಹೇಳುತ ಹೇಳನಮಾಡುವ ಮಹಾತ್ಮರಿಂದ
ತುಂಬಿದ್ದ ಊರೊಂದು ಮಹಾಸಮುದ್ರವಾಗಿದ್ದುದರಿಂದಲೂ, ಗೌರವ
ದಿಂದ ಬಾಳಿದೆಡೆಯಲ್ಲಿಯೇ ಮರಳಿ ಲಾಘವದಿಂದ ಜೀವನಮಾಡುವುದ
ಕ್ಕಿಂತ ಮರಣವಾದರೂ ಮೇಲಾಗಿ ಕಂಡುಬಂದುದರಿಂದಲೂ, ಹೇಗಾ
10 ದರೂ ಋಣವಿಮುಕ್ತಿಮಾಡಿಕೊಂಡು ಊರುಬಿಟ್ಟು ಮತ್ತೊಂದು
ಕಡೆಗೆ ಹೋಗಬೇಕೆಂದು ನಿಶ್ಚಯಿಸಿಕೊಂಡನು. ಆದುದರಿಂದ ಕೂಡಲೇ
ರಾಮಶಾಸ್ತ್ರಿಯವರ ಬಳಿಗೆ ಹೋಗಿ ಮನೆಯನ್ನು ಭೋಗ್ಯಮಾಡಿ
ಐನೂರುರೂಪಾಯಿಗಳನ್ನು ಸಾಲತೆಗೆದುಕೊಂಡು, ಹಣವನ್ನು ಸಂವ
ತ್ಸರಕ್ಕೆ ಬಡ್ಡಿಯೊಂದಿಗೆ ತೀರಿಸುವಂತೆಯೂ ಗಡುವಿನ ದಿನಕ್ಕೆ ಹಣಕೊ
15 ಡದಿದ್ದರೆ ಮನೆಯು ಆತನಿಗೆ ಕ್ರಯವಾಗುವಂತೆಯೂ ಪತ್ರವನ್ನು ಬರೆ
ದುಕೊಟ್ಟನು. ಆಪ್ರಕಾರವಾಗಿ ಸಾಲತಂದು ಅದರಲ್ಲಿ ನಾನೂರುರೂ
ಪಾಯಿಗಳಿಂದ ಋಣಗಳೆಲ್ಲವನ್ನೂ ತೀರಿಸಿಬಿಟ್ಟನು. ಸಾಲಕೊಟ್ಟ
ಎರಡನೆಯದಿನದಿಂದ ಮನೆಯನ್ನು ಬಿಟ್ಟು ತನ್ನಧೀನಮಾಡಬೇಕೆಂದು
ರಾಮಶಾಸ್ತ್ರಿ ಹೇಳಿಕಳುಹುತಿದ್ದನು. ಪೂರ್ವದಲ್ಲಿ ಸ್ಕಾಂದಪುರಾಣ
20 ವನ್ನು ಹೇಳಿಸಿದಾಗಿನಿಂದ ರಾಜಶೇಖರನ ಮನಸ್ಸಿನಲ್ಲಿ ಕಾಶೀಯಾತ್ರೆ
ಹೋಗಬೇಕೆಂದಿತ್ತು. ಆಕೋರಿಕೆ ಈಗ ಈವಿಧವಾಗಿ ಸಫಲವಾಗು
ವುದಕ್ಕೆ ಸಂತೋಷಪಟ್ಟು, ರಾಜಶೇಖರನು ಸಕುಟುಂಬವಾಗಿ ಗಂಗಾ
ಸ್ನಾನಮಾಡಿ ಬರುವುದಕ್ಕಾಗಿ ನಿಶ್ಚಯಿಸಿ, ಚಂದ್ರತಾರಾಬಲ ಚೆನ್ನಾ
ಗಿರುವ ಚರಲಗ್ನದಲ್ಲಿ ಪ್ರಯಾಣಕ್ಕೆ ಮುಹೂರ್ತವನ್ನಿಟ್ಟು, "ಪ್ರತಿಪ
25 ನ್ನವಮೀಪೂರ್ವೇ" ಎಂದಿರುವುದರಿಂದ ತಿಥಿಶೂಲೆಯಿಲ್ಲದಂತೆ ನೋಡಿ
ಕೊಂಡು "ನಪೂರ್ವೇಶನಿಸೋಮೇಚ" ಎಂಬುದರಿಂದ ವಾರಶೂಲೆ
ತಗಲದಂತೆ ಫಾಲ್ಗುಣಶುದ್ಧತ್ರಯೋದಶೀಬುಧವಾರದ ದಿನ ಮಧ್ಯಾಹ್ನ

ನಾಲ್ಕುಗಳಿಗೆಯ ಹೊತ್ತಿನಲ್ಲಿ ಹೊರಡುವುದಕ್ಕೆ ಬಂದು ಬಂಡಿಯನ್ನು
ಗೊತ್ತುಮಾಡಿ ತಂದನು. ಆವರಿದುವರೆಗೂ ಮಾಡಿದ ಯಾತ್ರೆಗಳೆಲ್ಲಾ
ಗೋದಾವರಿಯ ದಡದಿಂದ ಮನೆಗೂ ಮನೆಯಿಂದ ಗೋದಾವರಿಯ
ದಡದವರೆಗೂ ಅಲ್ಲದೆ ಅದಕ್ಕಿಂತ ದೊಡ್ಡಯಾತ್ರೆಗಳನ್ನೆಂದಿಗೂ ಮಾಡಿ
ದವರಲ್ಲ. 5

ಬಂಡಿಯನ್ನು ತರಿಸಿ ಮನೆಯಬಾಗಿಲಲ್ಲಿ ನಿಲ್ಲಿಸಿ ಪ್ರಯಾಣ
ಮುಹೂರ್ತ ಮೀರಿಹೋಗುವುದಕ್ಕೆ ಮುಂಚೆಯೇ ಬಂಡಿಯಲ್ಲಿ ಹಾಕ
ಬೇಕಾದ ವಸ್ತುಗಳನ್ನು ಹಾಕಬೇಕೆಂದು ರಾಜಶೇಖರನು ಬಲುಬಾರಿ
ತೊಂದರೆಯಿಟ್ಟಮೇಲೆ, ಮಾಣಿಕ್ಯಾಂಬೆ ಎದ್ದುಬಂದು ಬಂಡಿಯತುಂಬ
ಮಡಕೆಗಳನ್ನೂ ಬುಟ್ಟಿಗಳನ್ನೂ ತುಂಬಿ ಇನ್ನೊಂದು ಬಂಡಿಗೆಕೂಡ 10
ಸಾಕಾದಷ್ಟನ್ನು ಬೀದಿಯ ಬಾಗಿಲಲ್ಲಿ ತಂದಿಟ್ಟಳು ; ಬಂಡಿಯಲ್ಲಿಡಬೇ
ಕಾದ ಹಿತ್ತಳೆಯ ಪಾತ್ರೆಗಳೂ ಬಟ್ಟೆಗಳಿರುವ ಪೆಟ್ಟಿಗೆಗಳೂ ಒಳಗೇ
ಇದ್ದುವು. ಇಷ್ಟರಲ್ಲಿ ರಾಜಶೇಖರನು ಬಂದು ಆಬುಟ್ಟಿಗಳುಮುಂತಾ
ದುವನ್ನು ಬಂಡಿಯಿಂದ ತೆಗಿಸಿ, ಅವರು ಹೊರಟು ಹೋಗುತ್ತಾರೆಂದು
ಕೇಳಿ ನೋಡಬಂದ ಬಡಬಗ್ಗರಿಗೆ ಹಂಚಿಕೊಡಲಾರಂಭಿಸಿದನು. ಅದು 15
ವರೆಗೂ ಒಳಗಿನಿಂದ ಕದಲಿ ಬಾರದಿದ್ದರೂ ರಾಜಶೇಖರನು ವಸ್ತುಗ
ಳನ್ನು ಹಂಚಿಕೊಡುತ್ತಾನೆಂಬ ಮಾತನ್ನು ಕೇಳಿದ ಕೂಡಲೇ ನೆರೆ
ಮನೆಗಳ ಬ್ರಾಹ್ಮಣೋತ್ತಮರು ವಾಯುವೇಗದಿಂದೋಡಿಯೋಡಿ
ಬಂದರು. ಬಂಡಿಯಲ್ಲಿ ಸ್ಥಳ ಸಾಲದೆ ನೆಲದಮೇಲಿಟ್ಟಿದ್ದ ತಟ್ಟೆಗಳು
ಮೊದಲಾದುವನ್ನು ಮಾಣಿಕ್ಯಾಂಬೆ ತನ್ನನ್ನನುಸರಿಸುತಿದ್ದವರಿಗೆ ಹಂಚಿ 20
ಕೊಟ್ಟಳು. ತರುವಾಯ ಪೆಟ್ಟಿಗೆಗಳೂ ಹಿತ್ತಳೆಯಸಾಮಾನುಗಳೂ
ಬಂಡಿಯಲ್ಲಿಡಲ್ಪಟ್ಟುವು; ಮೊದಲು ನಾಲ್ಕು ಬಂಡಿಗಳಿಗೆ ಸರಿಹೋಗದ
ಸಾಮಾನುಗಳು ಈಗೊಂದುಬಂಡಿಗೇ ಸಾಲದೆ ಅದರಲ್ಲಿ ನಾಲ್ವರು
ಕುಳ್ಳಿರುವುದಕ್ಕೂ ಸ್ಥಳಕೂಡ ಮಿಕ್ಕಿತು. ರಾಜಶೇಖರನು ಎಷ್ಟು
ತೊಂದರೆಯಿಡುತಿದ್ದರೂ ಮಾಣಿಕ್ಯಾಂಬೆ ತನಗಾಪ್ತರಾದ ಸ್ತ್ರೀಯ 25
ರಲ್ಲಪ್ಪಣೆ ತೆಗೆದುಕೊಂಡು ಬರುವುದಕ್ಕೆ ಪ್ರತ್ಯೇಕವಾಗಿ ನಾಲ್ಕುಗಳಿಗೆ
ಆಲಸ್ಯ ಮಾಡಿದಳು. ಈಮಧ್ಯೇ ಮಂಚಗಳನ್ನು ಬಂಡಿಯ ಮೇಲೆ

ಕಟ್ಟಿಸಿ, ಹುಡುಗರನ್ನು ಬಂಡಿಯಲ್ಲಿ ಹತ್ತಿಸಿ, ರಾಜಶೇಖರನು ಕೋಪಿ
ಸಿಕೊಂಡುದರಿಂದ ಮಾಣಿಕ್ಯಾಂಬೆ ಬಂದು ಬಂಡಿಯಲ್ಲಿ ಕುಳಿತುಕೊಂ
ಡಳು. ಈಬಂಡಿಯವನ ಹತ್ತಿರಕ್ಕೆ ಬಂದಾಗಿನಿಂದ ಕೊಂಚ ಬೂಹು
ಲ್ಲನ್ನೂ ಬೇಕಾದಷ್ಟು ನೀರನ್ನೂ ಮಿತಾಹಾರವಾಗಿ ತೆಗೆದುಕೊಳ್ಳುತ
5 ಪಥ್ಯಮಾಡುತಿದ್ದ ಬಡ ಎತ್ತುಗಳು ಮೆಲ್ಲಗೆ ಬಂಡಿಯನ್ನೆಳೆಯಲಾರಂ
ಭಿಸಿದುವು. ಬಂಡಿಯಾಳೂ ಅವುಗಳ ಹಿಂದೆಯೇ ನಡೆಯುತ ಮೇವು
ಹಾಕುವುದರಲ್ಲಿ ಪರಮಲುಬ್ಧನಾಗಿದ್ದರೂ ಹೊಡೆಯುವುದರಲ್ಲಿ ಮಾತ್ರ
ಮಿಗಿಲೌದಾರ್ಯವನ್ನು ತೋರಿಸಸಾಗಿದನು. ರಾಜಶೇಖರನಿಂದ ಭಿಕ್ಷೆ
ವನ್ನು ಪಡೆಯುತಿದ್ದ ಕೀಳುಜಾತಿಯವರು ಊರ ಹೊರಗಿನವರೆಗೂ
10 ಬಂದು, ಅವರನ್ನು ಹಲವುವಿಧವಾಗಿ ಹರಸಿ, ವ್ಯಸನಾಕ್ರಾಂತರಾಗಿ
ಹಿಂದಿರುಗಿದರು. ಅಫೀಮುತಿಂದಿರುವುದರಿಂದಲೋ ಕುಡಿದಿರುವುದರಿಂ
ದಲೋ ಸಹಜವಾದ ಮತ್ತತೆಯಿಂದಲೋ ಈಮೂರೂಕೂಡ ಕಲೆತಿ
ರುವುದರಿಂದಲೋ ದಾರಿಯುದ್ದಕ್ಕೂ ತೂಗಾಡುತ್ತ ಜೂಗಳಿಸುತ್ತ ನಡೆ
ಯುತಿದ್ದ ಬಂಡಿಯವನು ಮೂಕಿಯಮೇಲೆ ಕುಳಿತುಕೊಂಡು, ಬಂಡಿ
15 ಯೊಳಗಿದ್ದವರಿಗೆ ಬೇಕಾದಷ್ಟು ಪರಿಮಳವೂ ಆಕಾಶದಲ್ಲಿ ಚಿಕ್ಕಮೇ
ಘಗಳೂ ಉಂಟಾಗುವಂತೆ ಅರ್ಧಸುಟ್ಟುಹೋಗಿದ್ದ ನಾಲ್ಕು ಹಳೆಯ
ಹೊಗೆಸುತ್ತುಗಳನ್ನು ಗುಪ್ಪುಗುಪ್ಪೆಂದು ಸುಟ್ಟು, ಬಂಡಿಯಲ್ಲಿನ
ಪೆಟ್ಟಿಗೆಗೆ ಒರಗಿಕೊಂಡು ಹಾಯಾಗಿ ನಿದ್ದೆಹೋದನು. ಬಂಡಿ ಮೆಲ್ಲಗೆ
ನಡೆಯುತಿದ್ದಂತೆಯೇ ಕಂಡುಬರುತಿತ್ತು, ಅಷ್ಟರಲ್ಲಿ ಕತ್ತಲೆಯೂ
20 ಕವಿದುಕೊಂಡಿತು. ಕೊಂಚ ಹೊತ್ತಿಗೆ ರಾಜಶೇಖರನು ಕೆಳಗೆನೋಡಿ
ದಾಗ ಬಂಡಿ ಕದಲುತಿದ್ದ ಹಾಗೆ ಕಾಣಬರಲಿಲ್ಲ. ಆಗ ಕುಂಭಕರ್ಣ
ನಂತೆ ನಿದ್ದೆಹೋಗುತಿದ್ದ ಆಬಂಡಿಯವನನ್ನು ಎಬ್ಬಿಸಪ್ರಯತ್ನಿಸಲು,
ಕೂಗುಗಳಿಂದೇನೂ ಪ್ರಯೋಜನವಿಲ್ಲದೆ ಅವನ ಕಾಲಿನ ಮೇಲೆ
ಹೊಡೆದ ದೆಬ್ಬೆಗಳುಮಾತ್ರ ಅವನನ್ನು ಕದಲಿ ಒಂದುಸಲ ಗೊಣ
25 ಗುಟ್ಟಿ ಮತ್ತೊಂದು ಪಕ್ಕದಲ್ಲಿ ಮಲಗುವಂತೆ ಮಾಡಿದುವು. ಮಹಾ
ಪ್ರಯತ್ನದಿಂದ ಅವನನ್ನೆಬ್ಬಿಸಿ ಕೆಳಕ್ಕಿಳಿದು ನೋಡುವವರೆಗೆ ಬಂಡಿಯು
ದಾರಿತಪ್ಪಿ ಒಂದು ಹಳ್ಳದಲ್ಲಿ ಮೊಣಕಾಲುದ್ದದ ಕೆಸರಲ್ಲಿ ಇಳಿಯಬಿ

ದ್ದಿತ್ತು. ಆಗೆಲ್ಲರೂ ಇಳಿದು ಯೌವಚ್ಛಕ್ತಿಯನ್ನುಪಯೋಗಿಸಿ ಎರಡು
ಗಳಿಗೆ ಬಂಡಿಯನ್ನು ಕೆಸರಿನಿಂದೆತ್ತಿ ಮಾರ್ಗಕ್ಕೆಳೆದುಕೊಂಡುಬಂ
ದರು ; ಆದರೆ ಎತ್ತುಗಳುಮಾತ್ರ ಬಂಡಿಯನ್ನೆಳೆದುಕೊಂಡು ಹೋಗು
ವ ಸ್ಥಿತಿಯಲ್ಲಿಲ್ಲದೆ ತಮ್ಮನ್ನೇ ಮತ್ತೊಬ್ಬರು ಹೊತ್ತುಕೊಂಡು ಹೋಗ
ಬೇಕಾದವಸ್ಥೆಯಲ್ಲಿದ್ದುವು. ಆದುದರಿಂದ ಕತ್ತಲೆಯಾಗುವವರೆಗೂ 5
ಬಂಡಿಯು ಶ್ರಮಪಟ್ಟು ಅವರನ್ನು ಸಾಗಿಸಿಕೊಂಡು ಬಂದುದಕ್ಕೆ
ಪ್ರತ್ಯುಪಕಾರವಾಗಿ ಈಗ ಕತ್ತಲೆ ಕವಿದುದಾದಕಾರಣ ಅವರೇ ಬಂಡಿ
ಯನ್ನೆಳೆದುಕೊಂಡು ಹೋಗಬೇಕಾದ ಗತಿ ಬಂತು. ಇಂತಹ ಅವಸ್ಥೆ
ಹಗಲು ಸಂಭವಿಸದೆ ರಾತ್ರಿ ಸಂಭವಿಸಿದುದಕ್ಕಾಗಿ ಎಲ್ಲರೂ ಬಹು
ಸಂತೋಷಪಟ್ಟರು ; ಎಲ್ಲರ ಬಟ್ಟೆಗಳಿಗೂ ಕೆಸರಿನಿಂದ ಚಿಕ್ಕವೂ 10
ದೊಡ್ಡವೂ ಆದ ನಾನಾವಿಧವಾದ ಹೂಗಳು ಹಾಕಲ್ಪಟ್ಟುವು. ಬಂಡಿ
ಯನ್ನು ಹತ್ತಿಕೊಂಡು ಬಂದವರಿಗೆ ಹೇಗಿದ್ದರೂ ನೋಡುವರುಮಾತ್ರ
ಇದ್ದರೆ ಅವರಿಗೆಷ್ಟೋವಿನೋದವುಂಟಾಗಿರುವುದು. ಬಂಡಿಯವನು
ಭೀಮಸಂತಪವನಾದಕಾರಣ ರಾಜಶೇಖರನ ಸಹಾಯದಿಂದ ಬಂಡಿ
ಯನ್ನು ಸುಲಭವಾಗಿ ಎಳೆಯುತ್ತಿರುವಾಗ, ಸುಬ್ರಹ್ಮಣ್ಯನು ಹಿಂದೆ 15
ನಿಂತು ಎತ್ತುಗಳನ್ನೂ ಸ್ತ್ರೀಯರನ್ನೂ ನಡೆಯಿಸಿಕೊಂಡು ಬಂದನು.
ಅವರು ನಡೆದೇ ಹೋಗಿದ್ದರೆ ಎರಡು ಜಾವಗಳೊಳಗಾಗಿ ರಾಜಮ
ಹೇಂದ್ರವರಕ್ಕೆ ಹೋಗಿ ಸೇರಿರುವರು. ಆದರೆ ಬಂಡಿಯನ್ನು ಕೂಡ ಎಳೆ
ದುಕೊಂಡುಹೋಗಬೇಕಾಗಿ ಬಂದುದಾದಕಾರಣ ರಾತ್ರಿ ಎರಡು ಜಾವ
ಗಳಿಗೆ ರಾಜಶೇಖರನ ಚಿಕ್ಕಪ್ಪನವರ ಮಗನಾದ ರಾಮಮೂರ್ತಿಯ 20
ಮನೆಯನ್ನು ಸೇರಿದರು. ಆಗೆಲ್ಲರೂ ನಿದ್ದೆಯಲ್ಲಿದ್ದರು ; ಆದುದರಿಂದ
ಬಂಡಿಯ ಶಬ್ದವಾದಕೂಡಲೇ ಬಾಗಿಲು ತೆರೆಯಲಿಲ್ಲ. ಕೊಂಚ
ಹೊತ್ತು ಬಾಗಿಲ ಹತ್ತಿರ ಕೂಗಿಟ್ಟಮೇಲೆ, ಹಜಾರದಲ್ಲಿ ಮಲಗಿದ್ದವ
ರಾರೋ ಎದ್ದು ಬಂದು ಕದವನ್ನು ತೆರೆದರು. ರಾಜಶೇಖರನ ಮಾತು
ಗಳು ಕೇಳಬಂದಕೂಡಲೇ ಒಳಗಣ ಕೊಠಡಿಯಲ್ಲಿ ಮಲಗಿದ್ದ ರಾಮ 25
ಮೂರ್ತಿ ಎದ್ದುಬಂದು, ಅಣ್ಣನನ್ನು ತಬ್ಬಿಕೊಂಡು, ಇವರು ಅದು
ವರೆಗೇ ಬರುವರೆಂದು ಕಾಯ್ದಿದ್ದು ಜಾವಹೊತ್ತಾದರೂ ಬಾರದಿದ್ದ

ಕಾರಣ ಆದಿನ ಹೊರಟಿಲ್ಲವೆಂದು ನಿಶ್ಚಯಿಸಿಕೊಂಡು ಭೋಜನಮಾಡಿ
ತಾನು ಮಲಗಿದೆನೆಂದು ಹೇಳಿ, ಇಷ್ಟು ಆಲಸ್ಯವಾಗಿ ಬರುವುದಕ್ಕೆ ಕಾರ
ಣವೇನೆಂದು ಕೇಳಿದನು. ತಾವು ಹೇಳಬೇಕಾದವಶ್ಯಕವಿಲ್ಲದೆ ತಮ್ಮ
ಬಟ್ಟೆಗಳೂ ಮೊಣಕಾಲಿನವರೆಗೂ ಕೆಸರಲ್ಲಿ ಇಳಿಯಬಿದ್ದಿದ್ದ ಕಾಲ್ಗಳೂ
5 ಹೇಳುವುದಕ್ಕೆ ಸಿದ್ಧವಾಗಿರುವುದನ್ನುಮಾತ್ರ ಆಲಸ್ಯಕಾರಣವಾಗಿ
ಹೇಳಿ, ಬಂಡಿಯನ್ನು ತಾವೆಳೆದುಕೊಂಡುಬಂದ ಸಂಗತಿಯನ್ನು ಮಾತ್ರ
ಹೇಳದೆ ರಾಜಶೇಖರನು ಮರೆಮಾಚಿದನು. ಆಗ ಕೊಡಬೇಕಾದ ಬಂಡಿ
ಯ ಬಾಡಿಗೆಯನ್ನು ಕೊಟ್ಟುಬಿಟ್ಟು ಬಂಡಿಯವನನ್ನು ಹೋಗೆಂದು
ಹೇಳಲಾಗಿ, ಅವನು ತಾನು ವಿಶೇಷವಾಗಿ ಶ್ರಮಪಟ್ಟೆದೇನೆಂದೂ ತನ್ನ
10 ಬಂಡಿಯೆತ್ತುಗಳಷ್ಟು ಒಳ್ಳೆಯವು ಮತ್ತೆಲ್ಲೂ ದೊರೆಯವೆಂದೂ ಹೇಳಿ
ತನ್ನನ್ನೂ ತನ್ನೆತ್ತುಗಳನ್ನೂ ಕೊಂಚಹೊತ್ತು ಶ್ಲಾಘಿಸಿಕೊಂಡು ಬಹು
ಮತಿ ಬರಬೇಕೆಂದು ಕೇಳಿದನು. ನಿಧಾನವಾಗಿ ಮಾತಾಡಿದರೆ ಮಾತಿನ
ಸಂದರ್ಭದಲ್ಲಿ ಬಂಡಿಯನ್ನೆಳೆದುಕೊಂಡುಬಂದ ಮಾತನ್ನೂ ಹೇಳಿಬಿಡು
ವನೋ ಎಂಬ ಭಯದಿಂದ ಸಾವಾನಿಳಿಸಿದೊಡನೆಯೇ ಬಹುಮತಿಯ
15 ನ್ನು ಕೂಡ ಕೊಟ್ಟು ರಾಜಶೇಖರನು ಕೂಡಲೇ ಅವನನ್ನು ಕಳುಹಿಬಿ
ಟ್ಟನು. ಹೊಸದಾಗಿ ಗಂಡಹೋದವರನ್ನು ಮುತ್ತೈದೆಗಳು ಭೋಜನ
ವಾದ ತರುವಾಯ ಮೊದಲುಸಾರಿ ನೋಡಬಾರದುದರಿಂದಲೂ ಆರಾತ್ರಿ
ಒಳ್ಳೆಯದಿನವಲ್ಲವಾದುದರಿಂದಲೂ ಸುವಾಸಿನಿಗಳೆಲ್ಲರೂ ಕೊಠಡಿಯೊ
ಳಕ್ಕೆ ಹೋಗಿ ಕದಹಾಕಿಕೊಳ್ಳಿರೆಂದು ಹೇಳಿ ವಿಧವೆಯೊಬ್ಬಳು
20 ಮುಂದಾಗಿ ರುಕ್ಮಿಣಿಯನ್ನೊಳಕ್ಕೆ ಕರೆದುತಂದು ಮತ್ತೊಂದುಕೊಠ
ಡಿಯೊಳಕ್ಕೆ ಕಳುಹಿ ಕದವನ್ನು ಮುಚ್ಚಿದಳು. ತರುವಾಯ ಬಳ
ಗಿನಿಂದ ಹೆಂಗಸರು ಬಂದು ಮಾಣಿಕ್ಯಾಂಬೆ ಮೊದಲಾದವರನ್ನು ಪಶ್ಚಿ
ಮದ ಮನೆಯೊಳಕ್ಕೆ ಕರೆದುಕೊಂಡು ಹೋಗಿ, ರುಕ್ಮಿಣಿಗೆ ಪ್ರಾಪ್ತ
ವಾದವಸ್ಥೆಗಾಗಿ ರೋದನೆಗಳುಮುಂತಾದುವು ತಣ್ಣಗಾದಮೇಲೆ, ಅವರ
25 ನಿಮಿತ್ತವಾಗಿ ಅದುವರೆಗೆ ಮಾಡಿದ್ದಡಿಗೆಯು ಮಿಕ್ಕಿತ್ತಾದುದರಿಂದ ಅವ
ರಿಗೆ ಬಡಿಸಿ ರಾಜಶೇಖರನಿಗೋಸ್ಕರ ಆಗ ಎತ್ತೆಸರಿಟ್ಟರು. ಎಲ್ಲರೂ
ಊಟಮಾಡಿದಮೇಲೆ ಮೂರು ಜಾವಕ್ಕೆ ಮಲಗಿ ಸುಖನಿದ್ರೆಮಾಡಿದರು.

ರಾಜಶೇಖರನು ಕೆಲವುದಿನಗಳು ರಾಮಮೂರ್ತಿಯ ಮನೆ
ಯಲ್ಲೇ ಇದ್ದನು. ಒಂದುದಿನ ದೋಣಿಯಮೇಲೆ ಗೋವೂರಿಗೆ
ಹೋಗಿ ಅಲ್ಲಿ ಪೂರ್ವಕಾಲದಲ್ಲಿ ಗೌತಮರು ತಪಸ್ಸುಮಾಡಿದ ಸ್ಥಲವ
ನ್ನೂ ಮಾಯೆಗೋವು ಬಿದ್ದಸ್ಥಳವನ್ನೂ ನೋಡಿ ಗೋಪಾದಕ್ಷೇತ್ರದಲ್ಲಿ
ಸ್ನಾನಮಾಡಿ ರಾತ್ರಿಗೆ ಮರಳಿ ಬಂದರು ; ಮತ್ತೊಂದುದಿನ ಕೋಟಿ 5
ಲಿಂಗಕ್ಷೇತ್ರಕ್ಕೆ ಸ್ನಾನಾರ್ಥವಾಗಿ ಹೋಗಿ ಅಲ್ಲೊಬ್ಬಶಾಸ್ತ್ರಿಯವರಿಂದ
ಪೂರ್ವದಲ್ಲಿ ಆಂಜನೇಯನೊಂದುಲಿಂಗವನ್ನೆತ್ತಿಕೊಂಡುಹೋಗಿ ಕಾಶಿ
ಯಲ್ಲಿ ಹಾಕೋಣವೂ ಆಗಿನಿಂದ ಕಾಶಿಕಾಪಟ್ಟಣವು ಪ್ರಸಿದ್ಧಿಗೆ ಬರೋ
ಣವೂ ಮೊದಲಾದ ಕಥೆಯನ್ನು ಕೇಳಿದರು ; ಇನ್ನೊಂದುದಿನ ರಾಜ
ರಾಜನರೇಂದ್ರನ ಕೋಟೆಗೆ ಹೋಗಿ ಅಲ್ಲಿ ಚಿತ್ರಾಂಗಿಯು ಉಪ್ಪರಿಗೆ 10
ಯಿದ್ದ ತಾವನ್ನೂ ಸಾರಂಗಧರನು ಪಾರಿವಾಳಗಳನ್ನು ಹಾರಿಸಿದ ಸ್ಥಳ
ವನ್ನೂ ನೋಡಿ, ಪೂರ್ವದಲ್ಲಿ ರಾಜರಾಜನರೇಂದ್ರನಿಗೆ ಅಮ್ಮನವರು
ಪ್ರತ್ಯಕ್ಷವಾಗಿ ನೀನೆಷ್ಟುದೂರ ಹಿಂದಕ್ಕೆ ತಿರುಗಿನೋಡದೆ ನಡೆಯು
ವೆಯೋ ಅಷ್ಟುದೂರ ಕೋಟೆಯಾಗುವುದೆಂದು ಹೇಳೋಣವೂ ಆತ
ನಾಪ್ರಕಾರವಾಗಿ ನಡೆಯುತ ಹಿಂದೆ ದೊಡ್ಡಧ್ವನಿಯಾಗುತಿರಲು ಕೊಂಚ 15
ಹೊತ್ತಿನಮೇಲೆ ಮನಸ್ಸು ನಿಲ್ಲದೆ ಹಿಂದಕ್ಕೆ ತಿರುಗಿ ನೋಡೋಣವೂ
ಸುತ್ತೂ ಚಿನ್ನದ ಕಟ್ಟಿನಿಂದ ಸ್ವಲ್ಪ ಕಡಮೆಯಾಗಿ ಮುಗಿಯಬಂದಿದ್ದ
ಕೋಟೆಯಷ್ಟರಲ್ಲೇ ನಿಂತುಹೋಗೋಣವೂ ಮೊದಲಾದ ಕಥೆಗ
ಳನ್ನು ಹತ್ತಿರಿದ್ದವರಿಂದ ಕೇಳಿ, ಸಾರಂಗಧರನ ಕೈಕಾಲ್ಗಳನ್ನು ಕತ್ತ
ರಿಸಿದ ಸ್ಥಳವನ್ನು ನೋಡಿ ಬರಬೇಕೆಂದು ಎಲ್ಲರೂ ಹೊರಟು 20
ಸಾರಂಗಧರನ ಗುಡ್ಡಕ್ಕೆ ಹೋಗಿ ಅಲ್ಲೊಂದು ನಿಂಬೆಯ ಗಿಡದ ಕೆಳಗೆ
ಸಾರಂಗಧರನ ಕೈಕಾಲ್ಗಳನ್ನು ಖಂಡಿಸಿದ ಕಲ್ಲುಬಂಡೆಯನ್ನೂ ಅದರ
ಸುತ್ತೂ ಹುಲ್ಲುಕೂಡ ಹುಟ್ಟದೆ ನುಣ್ಣಗಿರುವ ಪ್ರದೇಶವನ್ನೂ ಅದರ
ಸಮೀಪದಲ್ಲೇ ಸಿದ್ಧನು ಸಾರಂಗಧರನನ್ನು ಕರೆದುಕೊಂಡು ಹೋಗಿ
ಸ್ನಾನಮಾಡಿಸಿದ ಕೊಳವನ್ನೂ ನೋಡಿ ಬಂದರು. ರಾಜಮಹೇಂದ್ರವ 25
ರದಲ್ಲಿರುವಾಗ ರಾಜಶೇಖರನು ಪಟ್ಟಣದಲ್ಲಿರುವ ಜನರಿಗೂ ಹಳ್ಳಿಗಳ
ಲ್ಲಿರುವ ಜನರಿಗೂ ನಡವಳಿಕೆಗಳಲ್ಲಿ ಏನು ವ್ಯತ್ಯಾಸವಿರುವುದೊ

ನೋಡಬೇಕೆಂದು ಎಲ್ಲರ ಚರ್ಯೆಗಳನ್ನೂ ಪರೀಕ್ಷಿಸ ಸಾಗಿದನು ; ಅದು
ದರಿಂದ ಆತನಿಗೆ ಈಗೀಗ ನಿಜವಾದ ಪ್ರಪಂಚಜ್ಞಾನವು ಸ್ವಲ್ಪವಾಗಿ
ಹುಟ್ಟಲಾರಂಭಿಸಿತು. ಆಪಟ್ಟಣದಲ್ಲಿ ಎರವಾದರೂ ತಂದು ಕೈಗೆ ಬಳೆಗ
ಳನ್ನೂ ಉಂಗುರಗಳನ್ನೂ ಹಾಕಿಕೊಂಡು, ಆಗಸನ ಬಳಿಯಲ್ಲಿ ಬಾಡಿ
ಗೆಗೆ ತಂದುಕೊಂಡಾದರೂ ಭಾರಿಯಾದ ಬಟ್ಟೆಗಳನ್ನುಡುವವರು ಮಹಾ
ಗೌರವಕ್ಕೆ ಪಾತ್ರರಾಗಿದ್ದರು ; ಒಳಗೆ ಸಾರವೇನೂ ಇಲ್ಲದಿದ್ದರೂ ಕಿವಿ
ಗಳಿಗೆ ದೊಡ್ಡ ಕುಂಡಲಗಳನ್ನು ಮಾಡಿಸಿ ಹಾಕಿಕೊಂಡು, ತಲೆಗೆ
ದೊಡ್ಡ ಶಾಲುವನ್ನು ಸುತ್ತಿಕೊಂಡವರು ಮಹಾಪಂಡಿತರಾಗಿದ್ದರು ;
ಎಲ್ಲರೂ ಧನಿಕರ ಮನೆಗೆ ಹೋಗಿ ಅವರು ಜೀವಿತಕಾಲದಲ್ಲಾವಾ
ಗಲೂ ದೇವಾಲಯವನ್ನು ತುಳಿದು ನೋಡದೆ ಹೋದರೂ ಭಗವ
ನ್ನಾಮವನ್ನು ಕನಸಿನಲ್ಲಿಯಾದರೂ ಸ್ಮರಿಸದೆ ಹೋದರೂ ಅವರನ್ನು
ಪರಮಭಾಗವತೋತ್ತಮರೆಂದೂ ಭಕ್ತಾಗ್ರೇಸರರೆಂದೂ ಹೊಗಳು
ತಿದ್ದರು ; ನಿಜವಾದ ವಿದ್ವಾಂಸರ ಮತ್ತು ಕವೀಶ್ವರರ ಬಾಯಿಗಳೂ
ಹೊಟ್ಟೆಗಳೂ ಸದಾ ಶ್ಲೋಕಗಳಿಂದಲೂ ಪದ್ಯಗಳಿಂದಲೂ ಮಾತ್ರ
ತುಂಬಿದ್ದುವಲ್ಲದೆ, ಬಾಹ್ಯಡಂಭವಿಲ್ಲದುದರಿಂದ ಅನ್ನದಿಂದಾವಾಗಲೂ
ತುಂಬಿರಲಿಲ್ಲ ; ದಿನಕ್ಕೆಂಟು ದೊಂಬರಗುಡಿಸೆಗಳಲ್ಲಿ ದೂರಿದರೂ ಸ್ನಾನ
ಮಾಡಿದಂತೆ ಜುಟ್ಟನ್ನು ಚೆನ್ನಾಗಿ ಗಂಟುಹಾಕಿಕೊಂಡು ಪಂಚಕಚ್ಚೆ
ಯನ್ನು ಹಾಕಿಕೊಂಡು ತಿರುಗುವವರು ದೊಡ್ಡಮನುಷ್ಯರೆಂದು ಹೊಗ
ಳಲ್ಪಡುತಿದ್ದರು ; ನೂರೇಕೆ ? ಒಳಗೆ ಲಕ್ಷ ದುಷ್ಕಾರ್ಯಗಳನ್ನು ಮಾಡು
ತಿದ್ದರೂ ಬಾಹ್ಯವೇಷಧಾರಣದಲ್ಲಿಮಾತ್ರ ಲೋಪವಿಲ್ಲದಿದ್ದರೆ ಅವರ
ಪ್ರವರ್ತನವನ್ನು ಸಂಪೂರ್ಣವಾಗಿ ತಿಳಿದೂ ಅಂತಹವರಿಗೆಲ್ಲರೂ ಸಭೆ
ಗಳಲ್ಲಿ ಕೂಡ ಒಳ್ಳೆಯ ನಡವಳಿಕೆಯುಳ್ಳವರಿಗೆ ಮಾಡುವುದಕ್ಕಿಂತ
ಹೆಚ್ಚಾದ ಮರ್ಯಾದೆಯನ್ನು ಮಾಡುತಿದ್ದರು ; ನೀತಿವಿಷಯದಲ್ಲಿ
ಅವರ ಪ್ರವರ್ತನೆಯೆಷ್ಟುಹೇಯವಾಗಿದ್ದರೂ ಮತವಿಷಯದಲ್ಲಿಮಾತ್ರ
ಮೇಲಕ್ಕೆ ಭಕ್ತರಂತೆಯೇ ಕಾಣಬರುತಿದ್ದರು ; ನಿಲ್ಲುವುದಕ್ಕೆ ನೆಳಲಿಲ್ಲದೆ
ಬಾಧೆಪಡುತಿರುವ ಪ್ರಾಣಮಿತ್ರರಿಗೆ ಒಂದು ಕುಟೀರವನ್ನು ಕಟ್ಟಿಸಿ
ಕೊಡದವರುಸಹಿತ ಕಲ್ಲಿನ ವಿಗ್ರಹಗಳು ವಾಸಮಾಡುವುದಕ್ಕಾಗಿ

ಸಾವಿರಾರು ವೆಚ್ಚಮಾಡಿ ದೇವಾಲಯಗಳನ್ನು ಕಟ್ಟಿಸುತಿದ್ದರು ; ಕಟ್ಟಿ
ಸಿದವರು ಹೋದತರುವಾಯ ಮಸತಿಯಿಲ್ಲದೆ ಹಾಳುಬಿದ್ದ ನೂರಿಪ್ಪ
ತ್ತುಮೂರು ದೇವಾಲಯಗಳನ್ನು ಲೆಕ್ಕಮಾಡಿ, ರಾಜಶೇಖರನು
ಕೋಟಿಲಿಂಗಗಳುಕೂಡ ಪೂರ್ವದಲ್ಲಾವಾಗಲೋ ದೇವಾಲಯಗಳು
ಹಾಳಾದುದರಿಂದ ಆಪ್ರಕಾರವಾಗಿ ಮರಳುದಿಬ್ಬಗಳಲ್ಲಿ ಬಿದ್ದಿರುವುವಾ
ಗಿರಬಹುದೆಂದು ಸಂಶಯಪಟ್ಟನು ; ಅಲ್ಲಿ ವೇಶ್ಯೆಯರುವಿನಾ ಮತ್ತೆ
ಯಾವ ಸ್ತ್ರೀಯರೂ ಓದಿಕೊಳ್ಳದಿದ್ದರು.

ಅಲ್ಲಿ ಸಪ್ತಮಿಯವರೆಗೂ ಇದ್ದು ರಾಜಶೇಖರನು ಕಾಶಿಗೆ
ಹೊರಡುವುದಕ್ಕಾಗಿ ಪ್ರಯಾಣವಾದನು ; ಆದರೆ ಸಂವತ್ಸರಾದಿಯವ
ರೆಗೂ ಇರಬೇಕೆಂದು ರಾಮಮೂರ್ತಿಯು ಬಲವಂತಮಾಡಿದುದರಿಂದ
ಆತನ ಮಾತನ್ನು ತೆಗೆದುಹಾಕಲಾರದೆ ಒಪ್ಪಿಕೊಂಡನು. ಫಾಲ್ಗುಣ
ಬಹುಳ ಅಮಾವಾಸ್ಯೆಯದಿನ ಹಗಲು ಮೂರು ಜಾವದ ಹೊತ್ತಿನಲ್ಲಿ
ಸಂಪೂರ್ಣಸೂರ್ಯಗ್ರಹಣವು ಹಿಡಿಯಿತು. ಜನರೆಲ್ಲರೂ ಗೋದಾವರಿ
ಯಲ್ಲಿ ಗ್ರಹಣಸ್ನಾನಮಾಡಿ ತಮ್ಮ ಪಿತೃಗಳಿಗೆ ತರ್ಪಣಗಳನ್ನು ಕೊಡು
ತಿದ್ದರು ; ಕೆಲಬರು ಪುಣ್ಯಕ್ಕೋಸ್ಕರ ನವಗ್ರಹಜಪಮಾಡುತ ಬ್ರಾಹ್ಮ
ಣರಿಗೆ ನವಧಾನ್ಯಗಳನ್ನು ದಾನಮಾಡುತಿದ್ದರು ; ಕೆಲಬರು ಛಾಂದ
ಸರೂ ವೃದ್ಧಾಂಗನೆಯರೂ ಸೂರ್ಯನಿಗೆ ವಿಪತ್ತು ಬಂದುದೆಂದು
ಕಣ್ಣೀರನಿಟ್ಟುಕೊಳ್ಳಸಾಗಿದರು ; ಅವರಲ್ಲಿ ತಿಳಿದವರೆಂದೆಂದುಕೊಳ್ಳು
ವರು ಸೂರ್ಯನಿಗೆ ಹಿಡಿದಿರುವ ಪೀಡೆಯನ್ನು ಬಿಡಿಸುವುದಕ್ಕಾಗಿ ಮಂತ್ರ
ಗಳನ್ನು ಜಪಿಸುತಿದ್ದರು ; ಅವರಿಗಿಂತ ವಿವೇಕವಂತರು ಗ್ರಹಣಕಾಲ
ದಲ್ಲಿ ತಮ್ಮ ಹೊಟ್ಟೆಯೊಳಗೆ ಜೀರ್ಣವಾಗದ ಪದಾರ್ಥಗಳಿದ್ದರೆ ದೋಷ
ವೆಂದರಿತು ಅದಕ್ಕೆ ಹಿಂದೆ ಮೂರುಜಾವಗಳಿಂದ ಉಪವಾಸಮಾಡುತಿ
ದ್ದರು ; ಎಲ್ಲರೂ ಭೋಜನಪದಾರ್ಥಗಳಿರುವ ಪಾತ್ರೆಗಳಲ್ಲಿ ದರ್ಭೆಯ
ಹುಲ್ಲನ್ನು ಹಾಕುತಿದ್ದರು ; ಬಸುರಾದ ಸ್ತ್ರೀಯರು ಹೊರಗೆಬಂದರೆ
ಅಂಗಹೀನವಾದ ಮಕ್ಕಳು ಹುಟ್ಟುವರೆಂದೆಣಿಸಿ ದೊಡ್ಡವರು ಆಹೆಂಗ
ಸರನ್ನು ಕೊಠಡಿಗಳಲ್ಲಿ ಕೂಡಿ ಬೀಗಹಾಕಿ ಕದಲಮೆದಲಬೇಡಿರೆಂದಾ
ಜ್ಞಾಪಿಸಿದರು ; ಮತ್ತೆ ಕೆಲಬರು ಮಂತ್ರವೇತ್ತರೆಂದು ಹೆಸರಿಟ್ಟುಕೊಂಡಿ

ರುವರಿಗೆ ಏನನ್ನಾದರೂ ಕೊಟ್ಟು ಮಂತ್ರೋಪದೇಶವನ್ನು ಹೊಂದಿ ಶೀಘ್ರವಾಗಿ ಸಿದ್ಧಿಸುವುದಕ್ಕಾಗಿ ಎದೆಯುದ್ದದ ನೀರಲ್ಲಿ ಜಪಮಾಡುತಿದ್ದರು ; ಗ್ರಹಣಕಾಲದಲ್ಲಿ ಮೂಲಿಕೆಗಳಲ್ಲಿ ವಿಶೇಷಗುಣವಿರುವುದೆಂದೆಣಿಸಿ ಕೆಲವರು ಮೂಢರು ಸ್ನಾನಮಾಡಿ ನಿರ್ವಾಣವಾಗಿ ನಿಂತು ಜುಟ್ಟನ್ನು ಬಿರಿಯಹಾಕಿಕೊಂಡು ಗಿಡಗಳಿಗೆ ಧೂಪದೀಪಗಳನ್ನು ಸಮರ್ಪಿಸಿ ಬೇರುಗಳನ್ನು ತೆಗೆಯುತಿದ್ದರು ; ಗ್ರಹಣಸಮಯದಲ್ಲಿ ದಾನ ಮಾಡಿದರೆ ಮಹಾಪುಣ್ಯ ಬರುವುದೆಂದು ಹೇಳಿ ಬ್ರಾಹ್ಮಣಬ್ರುವರು ತಮ್ಮ ಬಟ್ಟೆಗಳು ನೆನೆಯದಂತೆ ಮೇಲಕ್ಕೆತ್ತಿ ಕಟ್ಟಿಕೊಂಡು ಮೊಣಕಾಲುದ್ದದ ನೀರಲ್ಲಿ ನಿಂತು ಸಂಕಲ್ಪವನ್ನು ಹೇಳುತ್ತ ಮೂಢರಿಂದಲೂ ಸ್ತ್ರೀಯರಿಂದಲೂ ನೀರುಕಾಸುಗಳನ್ನು ಗ್ರಹಿಸುತಿದ್ದರು. ಪೂರ್ವಾಚಾರವನ್ನು ಹಿಡಿದು ರಾಜಶೇಖರನು ತಾನೂ ಸ್ನಾನಮಾಡಿದನಾದರೂ ಮೇಲೆ ಹೇಳಿದ ಕೃತ್ಯಗಳನ್ನು ಮಾಡುವರೆಲ್ಲರೂ ಮೂಢರೆಂದೆಣಿಸಿ ಗ್ರಹಣವಿಷಯವಾಗಿ ಅಲ್ಲಿನ ಪಂಡಿತರ ಸಂಗಡ ವಾದಗಳನ್ನು ಮಾಡಲಾರಂಭಿಸಿದನು. ಆತನು ಜ್ಯೋತಿಷವನ್ನು ನಂಬಿದ್ದರೂ ಪುರಾಣಗಳನ್ನು ಮಾತ್ರ ಶಾಸ್ತ್ರವಿರುದ್ಧವಾಗಿರುವಾಗ ನಂಬುತಿರಲಿಲ್ಲ. ಆದಕಾರಣ–ಶ್ಲೋ ॥ ಪಶ್ಚಾದ್ಭಾಗಾಜ್ಜಲದವದಧಸ್ಸಂಸ್ಥಿತೋಭ್ಯೇತ್ಯ ಚಂದ್ರೋ ॥ ಭಾನೋರ್ಬಿಂಬಂಸ್ಫುರದಸಿತಯಾಛಾದಯತ್ಯಾತ್ಮಮೂರ್ತ್ಯಾ ॥ ಎಂಬ ಸಿದ್ಧಾಂತಶಿರೋಮಣಿಶ್ಲೋಕವನ್ನೂ, ಶ್ಲೋ ॥ ಛಾದಕೋಭಾಸ್ಕರಸ್ಯೇಂದುರಧಸ್ಥೋಘನವದ್ಭವೇತ್ । ಭೂಚ್ಛಾಯಾಂಪ್ರಾಙ್ಮುಖಶ್ಚಂದ್ರೋವಿಶತ್ಯಸ್ಯಭವೇದಸೌ ॥ ಎಂಬ ಸೂರ್ಯಸಿದ್ಧಾಂತಶ್ಲೋಕವನ್ನೂ ಹೇಳಿ, ಭೂಗೋಳಕ್ಕುಪರಿಭಾಗದಲ್ಲಿ ಸೂರ್ಯನಿರುವಾಗ ಚಂದ್ರನು ತನ್ನ ಗತಿವಿಶೇಷದಿಂದ ಸೂರ್ಯನಿಗೂ ಭೂಮಿಗೂ ನಡುವೆ ಸಮಕಳೆಯಲ್ಲಿ ಬಂದರೆ ಸೂರ್ಯಗ್ರಹಣವುಂಟಾಗುವುದಲ್ಲದೆ ಸೂರ್ಯನನ್ನು ರಾಹು ನುಂಗುವುದರಿಂದುಂಟಾಗದೆಂದೂ, ಪೌರಾಣಿಕರು ಹೇಳುವುದೇ ಗ್ರಹಣಕ್ಕೆ ಕಾರಣವಾಗಿದ್ದಪಕ್ಷದಲ್ಲಿ ರಾಹುಕೇತುಗಳ ಮನಸ್ಸುಗಳಲ್ಲಿರುವಭಿಪ್ರಾಯಗಳನ್ನು ತಿಳಿದುಕೊಳ್ಳುವುದಕ್ಕೆ ನಾವು ಶಕ್ತರಲ್ಲವಾದಕಾರಣ ಗ್ರಹಣವೀಗುಂಟಾಗುವುದೆಂದು

ಮೊದಲು ತಿಳಿದುಕೊಳ್ಳಲಾರೆವೆಂದೂ, ಸೂರ್ಯಗ್ರಹಣವು ಅಮಾವಾ
ಸ್ಯೆಯ ದಿನವೂ ಚಂದ್ರಗ್ರಹಣವು ಹುಣ್ಣಿಮೆಯ ದಿನವೂ ಮಾತ್ರ
ಹಿಡಿಯುವುದಕ್ಕೆ ಕಾರಣವಿರಲಾರದೆಂದೂ, ರಾಹುಕೇತುಗಳು ಆವಾ
ಗಲೂ ಅಂತರಿಕ್ಷದಲ್ಲಿ ಕಾಣದೆಹೋಗುವುದೆಲ್ಲರೂ ಅರಿತಿರುವುದರಿಂದ
ಸೂರ್ಯಚಂದ್ರರನ್ನು ನುಂಗುವಷ್ಟು ದೊಡ್ಡವಾಗಿದ್ದ ಪಕ್ಷದಲ್ಲಿ ಗ್ರಹಣ 5
ಸಮಯದಲ್ಲೇಕೆ ಕಾಣದಿರುವುವೆಂದೂ, ರಾಹುವೇ ನುಂಗುವುದಾದರೆ
ನಮ್ಮ ಪಂಚಾಂಗರೀತಿಯಾಗಿ ಈಗ್ರಹಣ ಒಂದು ದೇಶದಲ್ಲಿ ಕಾಣ
ಬಂದು ಮತ್ತೊಂದು ದೇಶದಲ್ಲಿ ಕಾಣದೆ ಹೋಗುವುದಕ್ಕೆ ಹೇತುವಿರ
ದೆಂದೂ, ರಾಜಶೇಖರನು ಬಹುದೂರ ವಾದಿಸಿದನು. ಅಲ್ಲಿದ್ದ ಪಂಡಿತ
ರಲ್ಲಾರಿಗೂ ಯುಕ್ತಿಗಳು ತೋಚದೆಹೋದರೂ ವಿಶೇಷವಾಗಿ 10
ಕೂಗುಗಳನ್ನು ಮಾತ್ರ ಕೂಗಿದರು. ಅಲ್ಲಿದ್ದವರಿಗೆ ಆವಾದವೇನೂ
ತಿಳಿಯಲಿಲ್ಲವಾದಕಾರಣ ಗಟ್ಟಿಯಾಗಿ ಅರಚಿದ ಶಾಸ್ತ್ರಗಳ ಹೆಸರಿನವರೇ
ಗಟ್ಟಿಗರೆಂದು ಮೆಚ್ಚಿಕೊಂಡು, ರಾಜಶೇಖರನ ವಾದವು ಬೌದ್ಧವಾದ
ವೆಂದು ದೂಷಿಸಿದರು. ಒಬ್ಬರನ್ನಣಕಿಸುವುದರಿಂದುಂಟಾಗಬೇಕಾದ
ಸಂತೋಷವಲ್ಲದೆ ಮತ್ತೊಂದುವಿಧದ ಸಂತೋಷವು ತಮಗಿಲ್ಲವಾದುದ 15
ರಿಂದ, ವಿದ್ಯಾಗಂಧವನ್ನರಿಯದ ಮೂರ್ಖಶಿರೋಮಣಿಗಳು ರಾಜಶೇ
ಖರನನ್ನು ಬಹುವಿಧಗಳಲ್ಲಿ ಪರಿಹಸಿಸಿ ಹೊಂದತಕ್ಕಾನಂದವೆಲ್ಲವನ್ನೂ
ಸಂಪೂರ್ಣವಾಗಿ ಅನುಭವಿಸಿದರು. ಅಷ್ಟರಲ್ಲಿ ಗ್ರಹಣಮೋಕ್ಷ
ಕಾಲವು ಸಮೀಪಿಸಿತಾದುದರಿಂದ ಎಲ್ಲರೂ ಮೋಕ್ಷಸ್ನಾನಮಾಡುವುದ
ಕ್ಕಾಗಿ ಹೋದರು. ಶುದ್ಧಮೋಕ್ಷವಾದ ತರುವಾಯ ಹೆಂಗಸರು 20
ಮುಂದಾಗಿ ಸ್ನಾನಮಾಡಿ ಬಂದು ಅಡಿಗೆಯನ್ನು ಮಾಡಿ ದೀಪಗಳನ್ನಿ
ಟ್ಟುಕೊಂಡು ಎಲ್ಲರೂ ಪ್ರಥಮಭೋಜನವನ್ನು ಮಾಡಿದರು.

---

## ಎಂಟನೆಯ ಪ್ರಕರಣ.

ಸಂವತ್ಸರಾದಿ—ರಾಜಶೇಖರನ ಪ್ರಯಾಣ—ರಾಜಾನಗರಕ್ಕೆ ಸಮೀಪದ ಲ್ಲೊಬ್ಬ ಅರಸು ಮೂರ್ಛೆಬೀಳುವುದು—ಕೆರಿಯುಕೆರೆಯ ಸಮೀಪದಲ್ಲೊಬ್ಬ ಯೋಗಿ ಕಾಣಬರುವುದು—ಕಳ್ಳರು ಹೊಡೆಯುವುದು—ರುಕ್ಮಿಣಿಯ ಮರಣ.

ಸಂವತ್ಸರಾದಿಯದಿನ ಬೆಳಗಾದ ತರುವಾಯ ರಾಮಮೂರ್ತಿಯು ಒಬ್ಬ ಜಟ್ಟಿಯನ್ನು ಕರೆಯಿಸಿ ಅವನಿಂದ ರಾಜಶೇಖರನಿಗೂ ಸುಬ್ರ ಹ್ಮಣ್ಯನಿಗೂ ತಲೆಯೊತ್ತಿಸಿದನು. ಮನೆಯಲ್ಲಿದ್ದ ಗಂಡಸರ ಅಭ್ಯಂ ಜನಸ್ನಾನಗಳಾದ ತರುವಾಯ, ಹೆಂಗಸರೆಲ್ಲರೂ ತಲೆಯೊತ್ತಿಕೊಂಡು
5 ನೀರೆರೆದುಕೊಂಡರು. ಸ್ನಾನಗಳಾದಮೇಲೆ ಬೇವಿನಹೂವನ್ನೂ ಹೊಸ ಮಾವಿನಕಾಯನ್ನೂ ಹೊಸಹುಣಿಸೆಯಹಣ್ಣಿನ ಹುಳಿಯನ್ನೂ ದೇಶಾಚಾರವನ್ನನುಸರಿಸಿ ಎಲ್ಲರೂ ಭಕ್ಷಿಸಿ, ಎರಡು ಜಾವಕ್ಕೆ ಭೋಜ ನಗಳನ್ನು ಮಾಡಿ ಹಬ್ಬಮಾಡಿಕೊಂಡರು. ಹಬ್ಬದ ದಿನಗಳಲ್ಲಿ ಜನರು ಮತ್ತಷ್ಟು ಹೆಚ್ಚಾಗಿ ಸುಖಪಡಬೇಕಾದುದಕ್ಕೆ ಬದಲಾಗಿ ಈದೇಶದಲ್ಲಿ
10 ವೇಳೆತಪ್ಪಿ ಭೋಜನಮಾಡಿ ದೇಹಗಳನ್ನು ಮತ್ತಿಷ್ಟಾಯಾಸಪಡಿಸಿ ಕೊಳ್ಳುವರು. ಮಧ್ಯಾಹ್ನದಮೇಲೆ ಬಿಸಿಲು ತಣ್ಣಗಾದ ಬಳಿಕ ರಾಮ ಮೂರ್ತಿಯು ರಾಜಶೇಖರನನ್ನು ಸಂಗಡ ಕರೆದುಕೊಂಡು ನೂತನ ಪಂಚಾಂಗಶ್ರವಣಕ್ಕಾಗಿ ವೇಣುಗೋಪಾಲಸ್ವಾಮಿಯವರ ಆಲಯಕ್ಕೆ ಹೋದನು. ಅದುವರೆಗೇ ಒಬ್ಬ ಸಿದ್ಧಾಂತಿಯು ಅರಿಸಿನದಿಂದ ಕಲಸಿ
15 ದಕ್ಷತೆಗಳನ್ನು ತಟ್ಟೆಯಲ್ಲಿ ಮುಂದಿಟ್ಟುಕೊಂಡು,—ಶ್ಲೋ॥ ಶ್ರೀಕಲ್ಯಾ ಣಗುಣಾವಹಂ ರಿಪುಹರಂದುಸ್ಸ್ವಪ್ನದೋಷಾಪಹಂ। ಗಂಗಾಸ್ನಾನವಿಶೇ ಷಪುಣ್ಯಫಲದಂಗೋದಾನತುಲ್ಯಂನೃಣಾಮ್। ಆಯುರ್ವೃದ್ಧಿದಮುತ್ತ ಮಂ ಶುಚಿಕರಂ ಸಂತಾನಸಂಪತ್ಪ್ರದಂ। ನಾನಾಕರ್ಮಸುಸಾಧನಂಸಮು ಚಿತಂಪಂಚಾಂಗಮಾಕರ್ಣ್ಯತಾಮ್॥ ಎಂಬ ಶ್ಲೋಕವನ್ನು ಹೇಳಿ,
20 ಸಂಕ್ರಾಂತಿಪುರುಷನ ಲಕ್ಷಣವನ್ನು ವಿವರಿಸಿ ಸಂವತ್ಸರಫಲವನ್ನು ಹೇಳಿ, ಧಾನ್ಯಾದಿಗಳ ಮತ್ತು ವೃಶ್ಚಿಕಾದಿಗಳ ವೃದ್ಧಿಕ್ಷಯಗಳ ನ್ನೋದಿ, ಜನ್ಮನಕ್ಷತ್ರಗಳನ್ನು ತಿಳಿಯದಿದ್ದರೆ ನಾಮನಕ್ಷತ್ರಗ ಳನ್ನು ತಿಳಿದುಕೊಂಡು ಎಲ್ಲರಿಗೂ ಕಂದಾಯಗಳ ಲೆಕ್ಕಗಳನ್ನೂ

ಆದಾಯವ್ಯಯಗಳನ್ನೂ ಹೇಳಿದನು. ಅಲ್ಲಿದ್ದ ಒಕ್ಕಲಿಗರು ಮತಾಂ
ದವರು ಸಿದ್ಧಾನ್ತಿಯವರ ಕೈಯಲ್ಲೇನಾದರೂ ಇಟ್ಟು ತಮಗಾವ
ಕಂದಾಯಗಳಲ್ಲೂ ಸೊನ್ನೆ ಬಾರದಂತೆ ಮಾಡಿಕೊಂಡರು. ಪಂಚಾಂ
ಗಶ್ರವಣವಾದ ತರುವಾಯ ರಾಮಮೂರ್ತಿಯು—“ ಸಿದ್ಧಾನ್ತಿಯವರೇ!
ಕಲಿಯುಗವು ಪ್ರಾರಂಭವಾಗಿ ಇಲ್ಲಿಗೆಷ್ಟು ಸಂವತ್ಸರಗಳಾಗಿವೆ ?” 5
ಎಂದು ಕೇಳಿದನು.

ಸಿದ್ಧಾನ್ತಿ—ಈಗ್ಗೆ ಕಲಿಯುಗಾದಿಗತಸಂವತ್ಸರಗಳು ೪೨೧೯ ;
ಶಾಲೀವಾಹನ ಶಕಾಬ್ದಗಳು ೧೭೯೧ ; ವಿಕ್ರಮಾರ್ಕಶಕಸಂವತ್ಸರ
ಗಳು ೧೯೨೬.

ರಾಮಮೂರ್ತಿ—“ ನಮ್ಮ ದೇಶದಲ್ಲಿ ಮ್ಲೇಚ್ಛರಧಿಕಾರ ಇನ್ನೆಷ್ಟು 10
ಕಾಲವಿರುವುದೊ ಕಾಲಮಾನವನ್ನು ಹಿಡಿದು ಹೇಳಬಲ್ಲಿರಾ ?”

ಸಿದ್ಧಾನ್ತಿ—“ ನಮ್ಮ ದೇಶದಲ್ಲಿ ತುರುಷ್ಕರ ದೊರೆತನವು ಐದು
ನೂರು ಸಂವತ್ಸರಗಳೊಳಗಾಗಿ ಹೋಗದು. ಆಮೇಲೆ ಪೂಸಪಾಟಿ
ಯವರ ವಂಶದಲ್ಲಿ ಬೇವಿನಕಾಯಷ್ಟು ಬಾಲವುಳ್ಳವನೊಬ್ಬನು ಹುಟ್ಟಿ,
ಆಸೇತುಹಿಮಾಚಲದಲ್ಲಿರುವ ಸರ್ವಪ್ರಪಂಚವನ್ನೂ ಮರಳಿ ಜಯಿ 15
ಸುವನು.”

ಅಷ್ಟರಲ್ಲಿ ಪ್ರದೋಷಸಮಯವಾದುದರಿಂದ ಪಂಚಾಂಗವನ್ನು
ಕಟ್ಟಿಯಿಟ್ಟು ಎಲ್ಲರೂ ತಮ್ಮ ಮನೆಗಳಿಗೆ ಹೋದರು.

ರಾಜಶೇಖರನು ಬಿದಿಗೆಯದಿನ ಕಾಶೀಯಾತ್ರೆಗೆ ಹೊರಡನಿಶ್ಚ
ಯಿಸಿಕೊಂಡು ಯಾರೆಷ್ಟುವಿಧಗಳಲ್ಲಿ ಹೇಳಿದರೂ ಕೇಳದೆ ಪ್ರಯಾಣ 20
ಮುಹೂರ್ತವನ್ನು ಇಡುವುದಕ್ಕಾಗಿ ಗುಡಿಯಲ್ಲಿ ಪಂಚಾಂಗವನ್ನೋ
ದಿದ ಪಿಡಪರ್ತಿಶ್ರೀರಾಮಸಿದ್ಧಾನ್ತಿಯನ್ನು ಕರೆಯಿಸಿದನು. ಆತನು
ತಿಥಿವಾರನಕ್ಷತ್ರಗಳನ್ನು ಚೆನ್ನಾಗಿ ಆಲೋಚಿಸಿ ಆರಾತ್ರಿಯೇ ಹದಿ
ನಾರು ಘಟಿಕೆ ಒಂಭತ್ತು ವಿಘಟಿಕೆಗಳಮೇಲೆ ಯಾತ್ರೆಗೆ ಯೋಗ್ಯಸಮ
ಯವೆಂದು ಮುಹೂರ್ತವನ್ನಿಟ್ಟನು. ಆಹೊತ್ತಿನಲ್ಲಿ ಕುಟುಂಬ 25
ದೊಂದಿಗೆ ಹೊರಡುವುದು ಕ್ಷೇಮಕರವಲ್ಲವೆಂದೆಣಿಸಿ, ರಾಜಶೇಖರನು
ನೆರೆಮನೆಯಲ್ಲಿ ಒಂದು ವಸ್ತ್ರವನ್ನೂ ಅದರಲ್ಲಿ ಸುತ್ತಿಟ್ಟೊಂದು ಪುಸ್ತಕ

ವನ್ನೂ ನಿರ್ಗಮನವಿಟ್ಟು ಬೆಳಗಾದ ತರುವಾಯವೇ ಹೊರಡುವುದಕ್ಕೆ ನಿಶ್ಚಯಿಸಿದನು. ಆಗ ರಾಮಮೂರ್ತಿಯು ಬಂಡಿಗಾಗಿ ವರ್ತಮಾನ ವನ್ನು ಕಳುಹಹೋಗಲು, ಬೇಡವೆಂದು ಹೇಳಿ ಬಂಡಿಯಲ್ಲಿ ಕುಳಿತು ಹೋದರೆ ಯಾತ್ರಾಫಲ ದಕ್ಕಲಾರದಾದುದರಿಂದ ಕಾಲ್ನಡಿಗೆಯಲ್ಲೇ 5 ಹೋಗುವೆವೆಂದು ರಾಜಶೇಖರನು ಹೇಳಿದನು. ಆರಾತ್ರಿಯೇ ಅವರೆ ಲ್ಲರಿಗೂ ಹೊಸಬಟ್ಟೆಗಳನ್ನು ಉಡುಗರೆಯಾಗಿ ಕೊಟ್ಟು, ರಾಮಮೂ ರ್ತಿಯು ಪ್ರಾತಃಕಾಲನಲ್ಲೇ ಅವರಿಗಿಂತ ಮೊದಲೇ ಎದ್ದು ಅವರು ಪ್ರಯಾಣವಾಗುವಾಗ್ಗೆ ಸಿದ್ಧವಾಗಿದ್ದನು. ಆಗ ರಾಜಶೇಖರನು ತಾನು ಧವಳೇಶ್ವರದಿಂದ ತಂದಿದ್ದ ಪಾತ್ರಸಾಮಗ್ರಿಗಳನ್ನೂ, ಮಂಚಗ 10 ಳನ್ನೂ, ಬಟ್ಟೆಗಳ ಪೆಟ್ಟಿಗೆಗಳನ್ನೂ ತಾನು ಮರಳಿ ಬರುವವರೆಗೂ ಭದ್ರವಾಗಿಟ್ಟಿರಬೇಕೆಂದು ರಾಮಮೂರ್ತಿಗೆ ಹೇಳಿ ಒಪ್ಪಿಸಿ, ದಾರಿಯ ಪ್ರಯಾಣಕ್ಕೆ ಮುಖ್ಯವಾಗಿ ಬೇಕಾದ ವಸ್ತುಗಳನ್ನು ಮಾತ್ರ ತನ್ನ ಸಂಗಡ ಇಟ್ಟುಕೊಂಡನು. ಮಾಣಿಕ್ಯಾಂಬೆ ಮುಂತಾದವರು ಹೊರ ಡುವಾಗ ರಾಮಮೂರ್ತಿಯ ಭಾರ್ಯೆ ಬೀದಿಯವರೆಗೂ ಬಂದು, ಅವರು 15 ದೂರದೇಶಯಾತ್ರೆಯನ್ನು ಮಾಡತೊಡಗಿದುದನ್ನು ನೆನಸಿಕೊಂಡು ಕಣ್ಣಿನಲ್ಲಿ ನೀರುತುಂಬಿಕೊಂಡಳು. ಆಗ ಅವರೆಲ್ಲರೂ ಬಾಗಿಲಲ್ಲಿದ್ದ ವರಿಂದ ಅಪ್ಪಣೆತೆಗೆದುಕೊಂಡು, ಒಂಟಿಬ್ರಾಹ್ಮಣನಿದಿರಾಗಿ ಬರುತಿರೆ ಆತನು ಹೋಗುವವರೆಗೂ ನಿಂತಿದ್ದು ಆಮೇಲೆ ಮುತ್ತೈದೆಯೊ ಬ್ಬಳು ಬಂದುದನ್ನು ನೋಡಿ ಒಳ್ಳೆಯಶಕುನವಾಯಿತೆಂದು ದಾರಿಸಾಗಿ 20 ನಡೆಯಲಾರಂಭಿಸಿದರು.

ರಾಜಶೇಖರ—ನೋಡಿದಿರಾ! ಆ ಆಲದಮರವು ಆಮೂಲಾಗ್ರ ವಾಗಿ ಚಿಗುರಿ, ಹವಳಗಳಂತಿರುವ ಕೆಂಪಾದ ಹಣ್ಣುಗೊಂಚಲುಗಳಿಂದ ಎಷ್ಟು ಮನೋಹರವಾಗಿದೆಯೊ?

ಸುಬ್ರಹ್ಮಣ್ಯ—ಅಹುದಹುದು. ಆದರ ಹತ್ತಿರಿರುವ ಮಾವಿನಗಿ 25 ಡವು ಚೀನಾಂಬರಗಳಂತಿರುವ ಎಳೆಯ ಚಿಗುರುಗಳಿಂದ ಮತ್ತಿಷ್ಟು ವಿಚಿತ್ರವಾಗಿದೆ. ಕೊನೆಯ ರೆಂಬೆಯನ್ನು ಸೇರಿ ಕೋಗಿಲೆಯೊಂದು ಮಧುರವಾದ ಕಂಠಧ್ವನಿಯಿಂದ ಕಿವಿಗೆ ಹಬ್ಬಮಾಡುತಿದೆ.

ರುಕ್ಮಿಣಿ—ಅಣ್ಣಾ! ರಾಮಗಿಣಿ ಕೊಂಬೆಯಮೇಲೆ ತಲೆಕೆಳಗಾಗಿ ನಿಂತುಕೊಂಡು ಸೀಬೆಹಣ್ಣನ್ನು ಹೇಗೆ ಮೂಗಿನಿಂದ ಕುಕ್ಕಿ ತಿನ್ನುತಿದೆಯೋ ನೋಡಿರಿ.

ಸೀತೆ—ಅಣ್ಣಯ್ಯಾ! ನನಗೆ ಆಮಾವಿನಕಾಯಿಕೊಯ್ದು ಕೊಡುವೆಯಾ?

ಸುಬ್ರಹ್ಮಣ್ಯ—ಅಮ್ಮಾಯಿ! ಗಿಡದಕೆಳಗೆ ಗಿಣಿಗಳು ಹೊಡೆದ ದೋರೆಹಣ್ಣುಗಳವೆ. ತಂದುಕೋ.

ಸೀತೆಯು ಓಡಿಹೋಗಿ ನಾಲ್ಕೈದುಕಾಯಿಗಳನ್ನು ತಂದುಕೊಂಡು ಕಡಿದು ನೋಡಿ ಪಂಚದಾರೆ*ಯಂತಿವೆಯೆಂದು ಕಂಕುಳು ಹೊಡೆದುಕೊಂಡಳು.

ಮಾಣಿಕ್ಯಾಂಬೆ—ಎಲ್ಲಿಂದಲೋ ಈಗ ಗುಪ್ಪೆಂದು ಮಲ್ಲಿಗೆಹೂವಿನ ವಾಸನೆ ಹೊಡೆಯುತಿದೆ!

ಸುಬ್ರಹ್ಮಣ್ಯ—ಅಮ್ಮಾ! ಬೇಗನೆ ಬಾ. ಅಗೋ ಪಗಡೆಯ ಗಿಡದ ಮೇಲೆ ಬಂದು ಅಡವಿಮಲ್ಲಿಗೆಬಳ್ಳಿ ಹಬ್ಬಿಕೊಂಡು, ಗೊಡೆಗಳ ತುಂಬುವಷ್ಟು ಬಿಳಿಯಹೂಗಳಿಂದ ತುಂಬಿದೆ. ನಮ್ಮ ಮನೆಯಲ್ಲೆಷ್ಟುನೀರುಹಾಕಿದರೂ, ಮಲ್ಲಿಗೆಹೂಗಳೀರೀತಿಯಾಗುವುದಿಲ್ಲವಲ್ಲಾ!

ಮಾಣಿಕ್ಯಾಂಬೆ—ಆಹಾ! ಪಗಡೆಹೂಗಳು ಎಷ್ಟುಸುವಾಸನೆಯುಳ್ಳವಾಗಿವೆ!

ಸುಬ್ರಹ್ಮಣ್ಯ—ಈಗ ಹತ್ತುಗಳಿಗೆಗಳ ಹೊತ್ತೇರಿದ್ದರೂ, ಗಾಳಿಯೆಷ್ಟು ತಣ್ಣಗೆ ಬೀಸುತ್ತಿದೆ! ನಮ್ಮ ಮನೆಯಹತ್ತಿರ ಯಾವಹೊತ್ತಾದರೂ ಬಿಸಿಲುಕಾಲದಲ್ಲಿ ಗಾಳಿ ಇಷ್ಟು ತಣ್ಣಗೆ ಇರುವುದೆ!

ರಾಜಶೇಖರ—ಸರ್ವೇಂದ್ರಿಯಗಳಿಗೂ ಸೌಖ್ಯವುಂಟಾಗುವಂತೆ, ಮಾರ್ಗಸ್ಥರ ಸಂತೋಷಕ್ಕಾಗಿ ಇಂತಹ ಎಲ್ಲವನ್ನೂ ಸೃಜಿಸಿ ನಿರ್ಹೇತುಕಜಾಯಮಾನಕಟಾಕ್ಷದಿಂದ ಸ್ವೇಚ್ಛೆಯಾಗಿ ಅನುಭವಿಸುವುದಕ್ಕೆ

---

*ಪಂಚದಾರೆ=ಸಕ್ಕರೆ.

ದಯೆಪಾಲಿಸಿರುವ ಈಶ್ವರನ ಮಹತ್ವವನ್ನರಿತು ಕೊಂಡಾಡುವುದಕ್ಕೆ ನಾವೆಷ್ಟರವರು ? ನಾವು ಯಾವಾಗಲೂ ಮನೆಯಿಂದ ಕದಲದೆ ಇದ್ದುದರಿಂದ ಇಂತಹ ಸೌಖ್ಯಗಳನ್ನಾವುವನ್ನೂ ಅರಿಯದವರಾಗಿದ್ದು, ನಾವೇ ಎಲ್ಲರಿಗಿಂತ ಹೆಚ್ಚಾಗಿ ಸುಖಪಡುತಿದೇವೆ ಎಂದು ಗರ್ವಪಡುತಿ
5 ದ್ದೆವು. ಈಯಡವಿಗಳಲ್ಲೇ ಸದಾ ಒಕ್ಕಲಿದ್ದು, ದೀನಬಂಧುವಾದ ಪರಮಾತ್ಮನ ಅನುಗ್ರಹದ ದೆಸೆಯಿಂದುಂಟಾದ ಈ ಸೌಖ್ಯಗಳನ್ನನುಭವಿಸುತಿರುವ ಈವನಚರರಾದ ಕಿರಾತರು ಮೊದಲಾದವರೆಷ್ಟು ಅದೃಷ್ಟವಂತರು ! ಆಹಾ ! ಗ್ರಾಮದಲ್ಲಾವಾಗಲೂ ನಮಗೆ ಈವಸಂತ ಕಾಲವು ಇಷ್ಟು ಮನೋಜ್ಞವಾಗಿರಲಿಲ್ಲವಷ್ಟೆ ?

10 ಸೀತೆ—ಅಮ್ಮಾ ನಾನಿನ್ನು ನಡೆಯಲಾರೆ. ನನ್ನೆತ್ತಿಕೋ.

ಮಾಣಿಕ್ಯಾಂಬೆ—ಆಗಿಡಗಳವರೆಗೂ ನಡೆದು ಬಾ. ಅಲ್ಲಿ ಎತ್ತಿಕೊಳ್ಳುತ್ತೇನೆ.—ರುಕ್ಮಿಣೀ! ಹಿಂದೆ ಬೀಳುತ್ತೀಯೇನು? ಎರಡು ಹೆಜ್ಜೆ ಬೇಗನೆ ಇಡು.

ರುಕ್ಮಿಣಿ—ಅಭ್ಯಾಸವಿಲ್ಲದ್ದರಿಂದ ಕಾಲುಗಳಲ್ಲಿ ಬೊಬ್ಬೆ ಎದ್ದುವು.
15 ಬೇಗನೆ ನಡೆಯಲಾರೆನು.

ರಾಜಶೇಖರ—ದನಕಾಯುತಿದ್ದವನನ್ನು ಕೇಳಿದೆನು. ಊರು ಒಂದು ಕೋಸು ದೂರವಿದೆಯಂತೆ! ಎರಡುಜಾವವಾಗುತ್ತ ಬಂತು. ಹೇಗಾದರೂ ಕೊಂಚ ಶ್ರಮಮಾಡಿ ನಾಲ್ಕು ಹೆಜ್ಜೆ ಬೇಗ ನಡೆಯಬೇಕು.

20 ಮಾಣಿಕ್ಯಾಂಬೆ—ಸೀತೆಯನ್ನೆತ್ತಿಕೊಂಡು ನಡೆಯುತಿದೇನೆ. ಹಸಿವಾಗುತಿದೆಯೆಂದು ಅಳುತ್ತಾಳೆ. ನಮ್ಮ ಬಲಗೈಕಡೆ ದೂರದಲ್ಲೇನೋ ಮನುಷ್ಯರ ಮಾತಿನ ಶಬ್ದ ಕೇಳಬರುತಿದೆ. ಅದು ಊರೇನೊ ನಾವೀಹೊತ್ತು ಅಲ್ಲಿ ಇಳಿಯೋಣವೆ ?

ರಾಜಶೇಖರ—ಯಾರೋ ಮನುಷ್ಯರು ಅಲ್ಲಿ ತೊಂದರೆಪಟ್ಟು
25 ಓಡುತಿದಾರೆ. ಅವರೆಲ್ಲಾರಿಗಾದರೂ ಆಪತ್ತು ಬಂದಿರಬಹುದು. ಶೀಘ್ರವಾಗಿ ಹೋಗೋಣ ಬನ್ನಿ.

ಎಂದು ವೇಗವಾಗಿ ನಡೆದು ಅವರು ಮನುಷ್ಯರ ಕಲಕಲಧ್ವನಿ ಕೇಳಬರುತಿದ್ದ ಪ್ರದೇಶಕ್ಕೆ ಸಮೀಪವಾಗಿ ಹೋಗಲು, ಮಾರ್ಗಕ್ಕೆ ಸ್ವಲ್ಪದೂರದಲ್ಲಿ ದಕ್ಷಿಣದಿಕ್ಕಿನಲ್ಲಿ ಮುಸುರಿದ್ದ ಗುಂಪಿನಿಂದ 'ಶುದ್ಧಿ ಮಾಡುವುದಕ್ಕೆ ಮಜ್ಜಿಗೆ' ಎಂದು ಕೂಗುತ ಕೆಲವರು ಓಡಿಬರು ತಿದ್ದರು. ರಾಜಶೇಖರನು ಅವರನ್ನು ನೋಡಿ ಆಸಂದಣಿಯೇನೆಂದು 5 ಕೇಳಲಾಗಿ ಅವರಲ್ಲೊಬ್ಬ ಗೊಲ್ಲನು 'ಅರಸುಮಗನೊಬ್ಬನು ಬಿಸಿ ಲಿನ ಝಳದಿಂದ ಬಸವಳಿದು ಆ ಅರಳಿಯಮರದ ಕೆಳಗೆ ಬಿದ್ದು ಹೋಗಿ ದಾನೆ' ಎಂದು ಹೇಳಿದನು.

ರಾಜಶೇಖರ—ನೀವಾತನ ಬಾಯೊಳಗೆ ಕೊಂಚ ನೀರುಹಾಕದೆ ಹೋದಿರಾ! 10

ಗೊಲ್ಲ—ಮೊಟ್ಟಮೊದಲು ನಾವು ನೀರುಕೊಡಹೋದಾಗ, ಶೂದ್ರರಾದುದರಿಂದ ನಮ್ಮ ಕೈನೀರುಕುಡಿಯೆನೆಂದು ಆ ಅರಸು ತೆಗೆ ದುಕೊಳ್ಳಲಿಲ್ಲ. ತರುವಾಯ ದಾಹಕ್ಕೆ ತಾಳಲಾರದೆ ನಮ್ಮ ಕೈಯಿಂದ ನೀರನ್ನು ಕುಡಿಯುವುದಕ್ಕೊಪ್ಪಿಕೊಂಡನು. ಆದರೆ ನಮ್ಮವರಲ್ಲಿ ಹಿರಿಯನು ಬಂದು, ಶೂದ್ರನು ಅರಸನ ಬಾಯಲ್ಲಿ ನೀರುಹಾಕಿದರೆ 15 ಪಾಪ ಬರುವುದೆಂದು ಹೇಳಿ, ನೀರುಶುದ್ಧಿಮಾಡುವುದಕ್ಕೆ ಮಜ್ಜಿಗೆಯ ನಿಮಿತ್ತವಾಗಿ ನಮ್ಮನ್ನು ಕಳುಹಿದನು. ನಮ್ಮ ಹಳ್ಳಿ ಇಲ್ಲಿಗೆ ಕಾಲುಕೋಸುದೂರದಲ್ಲಿದೆ. ನೀವು ಬ್ರಾಹ್ಮಣರಾಗಿ ಕಾಣುತೀರಿ. ನಿಮ್ಮ ಹತ್ತಿರ ಏನಾದರೂ ಒಳ್ಳೆಯ ತೀರ್ಥವಿದ್ದರೆ, ಬೇಗನೆ ಹೋಗಿ ಆತನ ಗಂಟಲಿನಲ್ಲಿ ನಾಲ್ಕುಬೊಟ್ಟುಬಿಟ್ಟು ಪುಣ್ಯವನ್ನು ಕಟ್ಟಿ 20 ಕೊಳ್ಳಿ.

ಆಮಾತುಗಳನ್ನು ಕೇಳಿ ರಾಜಶೇಖರನು ರುಕ್ಮಿಣಿಯ ಕೈಯ ಲ್ಲಿದ್ದ ಸೀನೀರಿನ ಚೆಂಬನ್ನು ತೆಗೆದುಕೊಂಡು, ಓಡುತ ಮರದ ಕೆಳಕ್ಕೆ ಹೋಗಿ ಗುಂಪಿನಲ್ಲಿ ದಾರಿಮಾಡಿಕೊಂಡು ಮುಂದಕ್ಕೆ ನಡೆದು, ಗುಂಪಿನ ಮಧ್ಯೇ ಮರದ ನೆರಳಲ್ಲಿ ಬರಿಯ ನೆಲದಮೇಲೆ ಮಲಗಿಕೊಂಡು 25 ಕೈಯಿಂದ ಬಾಯನ್ನು ತೋರಿಸಿ ನೀರಿನ ನಿಮಿತ್ತವಾಗಿ ಸನ್ನೆಮಾಡು ತಿದ್ದ ಒಬ್ಬ ಮನುಷ್ಯನನ್ನು ನೋಡಿದನು. ಆಗುಂಪಿನಲ್ಲೊಬ್ಬನು

ನೀರಿನ ಮೊಗೆಯನ್ನು ಕೈಯಲ್ಲಿ ಹಿಡಿದುಕೊಂಡು, ‘ ಈಯರಸು ನಿಷ್ಕಾ
ರಣವಾಗಿ ಸತ್ತು ಹೋಗುತಿದಾನೆ, ಯಾವ ದೋಷ ಬಂದರೂ ಸರಿ,
ನೀರುಹಾಕಿ ಬದುಕಿಸುವೆನು ’ ಎಂದು ಸಮೀಪಕ್ಕೆ ಹೋಗುತಿದ್ದನು.
ಆಗ ಒಬ್ಬ ಮುದುಕನು ಅಡ್ಡವಾಗಿ ಬಂದು ಅವನ ಕೈಹಿಡಿದು ನಿಲ್ಲಿಸಿ,
5 ‘ ಇದುವರೆಗೆ ಪೂರ್ವಜನ್ಮದಲ್ಲಿ ನಾವೆಷ್ಟೋ ಪಾಪಗಳನ್ನು ಮಾಡಿರು
ವುದರಿಂದಲೇ ನಮಗೀಗ ಈಶೂದ್ರಜನ್ಮವು ಬಂದಿದೆ; ಈಗ ಈ
ಅರಸನನ್ನು ಜಾತಿಭ್ರಷ್ಟನನ್ನಾಗಿ ಮಾಡಿ ಈಪಾಪವನ್ನುಸಹಿತ ಕಟ್ಟಿ
ಕೊಳ್ಳಬೇಕೆ ? ನನ್ನ ಮಾತುಕೇಳು ನೀರುಹಾಕಬೇಡ ’ ಎಂದು
ವಾರಿಸುತಿದ್ದನು. ಅಷ್ಟರೊಳಗೆ ಅರಸು ಕಣ್ಣುಗಳನ್ನು ತೇಲು
10 ಮೇಲುಮಾಡಿ ಕೈಯನ್ನು ಬಾಯಹತ್ತಿರಕ್ಕೆತ್ತಹೋಗಿ ನಡುಗಿಸುತ
ಕೆಳಕ್ಕೆ ಹಾಕಿದನು. ಆಗ ರಾಜಶೇಖರನು ಕೂಡಲೇ ಹೋಗಿ ನೀನೀ
ರಿನಿಂದ ಮೊದಲು ಒಣಗಿಹೋಗುತಿದ್ದ ತುಟಿಗಳನ್ನು ನನೆಯಿಸಿ
ಬಾಯಲ್ಲಿ ಕೊಂಚ ನೀರನ್ನು ಹಾಕೆ ಕೊಂಚ ಹೊತ್ತಿಗೆ ಆತನು ಮೆಲ್ಲಗೆ
ಚಪ್ಪರಿಸಲಾರಂಭಿಸಿದನು. ಅಷ್ಟರಲ್ಲಿ ರಾಜಶೇಖರನು ತನ್ನ ಕೈಯ
15 ಲ್ಲಿದ್ದುದಕದಿಂದ ಮುಖವನ್ನು ನನೆಯಿಸಿ, ಇನ್ನೂ ಕೊಂಚ ನೀರನ್ನು
ಬಾಯೊಳಕ್ಕೆ ಹಾಕಲು ಕುಡಿದು, ಕಣ್ಣುಬಿಟ್ಟು ನೋಡಿ ಮಗ್ಗುಲಾಗಿ
ತಿರುಗಿಕೊಂಡು, ಆ ಅರಸು ತನ್ನ ಜೀವವನ್ನು ನಿಲ್ಲಿಸಿದುದಕ್ಕಾಗಿ
ರಾಜಶೇಖರನಿಗೆ ಕೃತಜ್ಞತೆಯಿಂದ ಬಹುನಮಸ್ಕಾರಗಳನ್ನು ಮಾಡಿ
ಎದ್ದು ಕುಳಿತುಕೊಂಡನು. ಅಷ್ಟರೊಳಗೆ ಹಳ್ಳಿಗೆ ಹೋಗಿದ್ದವರು
20 ಮಜ್ಜಿಗೆಯನ್ನೂ ಕೆಲವು ಹಣ್ಣುಗಳನ್ನೂ ತೆಗೆದುಕೊಂಡುಬಂದು
ಕೊಟ್ಟರು. ಆಅರಸು ಕೆಲವು ಹಣ್ಣುಗಳನ್ನು ತಿಂದು ನೀರನ್ನು
ಕುಡಿದು ಸ್ವಸ್ಥಪಟ್ಟನು. ಅಲ್ಲಿದ್ದವರೆಲ್ಲರೂ ತಮ್ಮ ತಮ್ಮ ದಾರಿಗ
ಳಲ್ಲಿ ಹೊರಟುಹೋದರು. ಈ ಮಧ್ಯೇ ಮಾಣಿಕ್ಯಾಂಬೆ ಮೊದಲಾ
ದವರು ಬಂದುಗಿಡದ ನೆರಳಲ್ಲಿ ಕುಳಿತಿದ್ದು ಮಾರ್ಗಾಯಾಸವನ್ನು
25 ಕೊಂಚ ತೀರಿಸಿಕೊಂಡರು. ರಾಜಶೇಖರನು ಮಿಗಿಲುಬಳಲಿದ್ದವ
ನಾದರೂ, ಸಮೀಪದಲ್ಲೆಲ್ಲೂ ಊರಿಲ್ಲವೆಂದು ಕೇಳಿ ಎಷ್ಟು ಹೊತ್ತಾದರೂ
ರಾಜಾನಗರಕ್ಕೆ ಹೋಗನಿಶ್ಚಯಿಸಿಕೊಂಡು, ತಮ್ಮವರೆಲ್ಲರನ್ನೂ ಏಳ

ರೆಂದು ಹೇಳಿ ಆಅರಸಿನೊಂದಿಗೆ ಮಾತಾಡುತ ದಾರಿಸಾಗಿ ನಡೆಯಲಾ
ರಂಭಿಸಿದನು.

ರಾಜಶೇಖರ—ಅರಸಿನವರೇ ! ನಿಮ್ಮ ಹೆಸರೇನು ? ನಿಮ್ಮ ನಿವಾ
ಸಸ್ಥಾನವೆಲ್ಲಿ ? ನೀವಿಲ್ಲಿಗೊಬ್ಬರಾಗಿ ಏತಕ್ಕೆ ಬಂದಿರಿ ?

ಅರಸು—ನನ್ನ ಹೆಸರು ರಾಮರಾಜ ; ಪೆದ್ದಾಪುರಕ್ಕೆ ಸಮೀಪದ 5
ಲ್ಲಿರುವ ಕಟ್ಟಮೂರು ನಮ್ಮ ವಾಸಸ್ಥಲ ; ನಮಗಲ್ಲಿ ನಾಗಳದ
ಬೇಸಾಯವಿದೆ ; ರಾಜಮಹೇಂದ್ರವರದಲ್ಲಿರುವ ನಮ್ಮ ನೆಂಟರನ್ನು
ನೋಡುವುದಕ್ಕಾಗಿ ಹತ್ತು ದಿನಗಳ ಕೆಳಗೆ ಹೋಗಿ, ನಿನ್ನೆ ಬೆಳಗಿನ
ಜಾವಕ್ಕೆ ಹೊರಟು ಹಿಂದಿರುಗಿ ಬರುತ್ತಿರುವಾಗ ಒಂದು ದೊಡ್ಡಹುಲಿ
ಬಂದು ನನ್ನನ್ನಿದಿರಿಸಿತು ; ನನ್ನ ಮೇಲಿದ್ದುತ್ತರೀಯವನ್ನು ಬೇಗನೆ 10
ಎಡಗೈಗೆ ಸುತ್ತಿಕೊಂಡು ಆಕೈಯನ್ನು ಹುಲಿಬಾಯಿಗಂದಿಸಿಕೊಟ್ಟು
ಬಲಗೈಯಲ್ಲಿದ್ದ ಕತ್ತಿಯಿಂದ ಅದರೆದೆಯಲ್ಲಿ ತಿವಿದೆನು ; ಆಹುಲಿ
ಬಹುಬಲವುಳ್ಳುದಾದಕಾರಣ ಆಪೆಟ್ಟನ್ನು ಲಕ್ಷ್ಯಮಾಡದೆ ದಾರಿಯು
ದ್ದಕ್ಕೂ ರಕ್ತವು ಕಾಲುವೆಗಟ್ಟುವಂತೆ ನನ್ನನ್ನಡವಿಯೊಳಕ್ಕೆಳೆದು
ಕೊಂಡು ಹೋಯಿತು ; ಇಷ್ಟರಲ್ಲಿ ನಾನೂ ಕತ್ತಿಯಿಂದ ಅದನ್ನು 15
ಹಲವುಕಡೆಗಳಲ್ಲಿ ತಿವಿದೆನಾದುದರಿಂದ ನಡೆಯಲಾರದೆ ಒಂದು ವೃಕ್ಷದ
ಸಮೀಪದಲ್ಲಿ ಬಿದ್ದುಹೋಯಿತು. ನಾನು ಬಹುಪ್ರಯಾಸದಿಂದ
ಕೈಬಿಡಿಸಿಕೊಳ್ಳುವುದಕ್ಕಾಗಿ ಬಲಗೈಯಲ್ಲಿದ್ದ ಕತ್ತಿಯನ್ನು ಬಿಟ್ಟು
ಅದರ ಬಾಯಿಬಿಡಿಸಿ ಕೈಯನ್ನು ಹೊರಕ್ಕೆ ತೆಗೆದುಕೊಂಡೆನು ; ಈ
ಮಧ್ಯೇ ಮೊದಲಿನದಕ್ಕಿಂತ ಬಲವಾದ ಮತ್ತೊಂದು ವ್ಯಾಘ್ರವು ಹತ್ತಿರ 20
ಪೊದೆಯಲ್ಲಿದ್ದು ನನ್ನ ಮೇಲಕ್ಕೆ ದುಮಿಕಿತು ; ಆದರೆ ದೈವವಶ
ದಿಂದ ಕೊಂಚ ಗುರಿತಪ್ಪಿ ನನ್ನ ಪಕ್ಕದಲ್ಲಿದ್ದ ಚಿಕ್ಕ ಹಳ್ಳದಲ್ಲಿ ಬಿತ್ತು ;
ಕತ್ತಿಯನ್ನು ತೆಗೆದುಕೊಳ್ಳುವುದಕ್ಕೂ ಸಮಯ ಸಿಕ್ಕಲಿಲ್ಲ. ಆದು
ದರಿಂದ ತತ್‌ಕ್ಷಣವೇ ನಾನು ಗಿಡಹತ್ತಿ ಅದು ಮರಳಿ ಎದ್ದು ಬರುವುದ
ರೊಳಗಾಗಿ ಮೇಲಿನ ರೆಂಬೆಗೆ ಸೇರಿ ಕುಳಿತುಕೊಂಡೆನು ; ಹುಲಿ 25
ಬಿಟ್ಟು ಹೋಗದೆ ವೃಕ್ಷದ ಕೆಳಗೆ ತಿಷ್ಠಹಾಕಿ ಕುಳಿತುಕೊಂಡಿತು ;
ಈಹೊತ್ತು ಬೆಳಗಾದಮೇಲೆ ಹತ್ತುಗಳಿಗೆಯಹೊತ್ತೇರುವವರೆಗೂ

ಅದೇಪ್ರಕಾರವಾಗಿಯೇ ಇದ್ದು ಕೊನೆಗೆ ಬಳಲಿ ಎದ್ದು ಹೋಯಿತು ; ನಾನು ನಿನ್ನೆ ಉದಯದಿಂದ ನಿದ್ರಾಹಾರಗಳಿಲ್ಲದೆ ವೃಕ್ಷಶಾಖೆಯಲ್ಲೇ ಇದ್ದು, ಹುಲಿ ಹೊರಟುಹೋದಮೇಲೆ ಮೆಲ್ಲಗೆ ಗಿಡವನ್ನಿಳಿದು ಕತ್ತಿಯನ್ನು ತೆಗೆದುಕೊಂಡು ಹೊರಟು ನಿನ್ನೆಯೆಲ್ಲಾ ಬಿಸಿಲಿನಲ್ಲಿ ಬಳಲಿದ್ದೆನಾದುದರಿಂದ ನಾಲಗೆಯೊಣಗಿ ನಡೆಯುವುದಕ್ಕೆ ಕಾಲಲ್ಲಿ ಸತ್ವವಿಲ್ಲದೆ ಯಾವರೀತಿಯಲ್ಲೋ ದೇಹವನ್ನು ಈವೃಕ್ಷಚ್ಛಾಯೆಗೆ ಎಳೆದುತಂದು ಬಿದ್ದುಬಿಟ್ಟೆನು. ನನಗೆ ಕೈಯಮೇಲೆಮಾತ್ರ ಇಗೋ! ಎರಡು ಗಾಯಗಳಾಗಿವೆ.

ಎಂದು ಹೇಳಿ ಕೈತೋರಿಸಿ ಮೇಲಕ್ಕೆ ಕೈಗೋಲಿನಂತೆ ಕಾಣುತಿದ್ದ ಒರೆಯಲ್ಲಿದ್ದ ಕತ್ತಿಯನ್ನು ಹಿರಿದು ತೋರಿಸಿದನು. ರಾಜಶೇಖರನು ಅದನ್ನು ತೆಗೆದುಕೊಂಡು ನೋಡಿ ಆತನು ಮಾಡಿದ ಸಾಹಸಕಾರ್ಯಕ್ಕಾಗಿ ಮಿಗಲಾಗಿ ಆಶ್ಚರ್ಯಪಟ್ಟನು.

ರಾಮರಾಜ—ನನಗೆ ನೀವು ಈದಿನ ಹೋದ ಪ್ರಾಣಗಳನ್ನು ಮರಳಿ ಕೊಟ್ಟಿರಿ; ನಿಮಗೆ ನನ್ನ ಪ್ರಾಣಗಳನ್ನು ಕೊಟ್ಟರೂ, ನೀವು ಮಾಡಿದುಪಕಾರದ ಋಣವು ತೀರದು. ನನ್ನಲ್ಲಿ ದಯೆಯಿಟ್ಟು ನಾನು ಕೃತಜ್ಞತಾಸೂಚಕವಾಗಿ ಮಾಡುವ ನಮಸ್ಕಾರಗಳನ್ನಂಗೀಕರಿಸಿರಿ. ಅದೃಷ್ಟದೇವತೆ ಇತರರನ್ನು ಧನದಾನಮೊದಲಾದ ಕಾರ್ಯಗಳಿಂದ ತಮ್ಮ ಕೃತಜ್ಞತೆಯನ್ನು ತಿಳಿಸುವಂತೆ ಮಾಡಿ, ಈಗ ಬಡವನಾಗಿರುವ ನನ್ನನ್ನು ಮಾತ್ರ ನಿಮ್ಮಷ್ಟರ ಮಹೋಪಕಾರಿಗೆ ಬರಿಮಾತುಗಳಿಂದಲೇ ನನ್ನ ಕೃತಜ್ಞತೆಯನ್ನು ತಿಳಿಸುವಂತೆ ಮಾಡಿದುದಕ್ಕಾಗಿ ಎಷ್ಟೋ ಚಿಂತಿಸುತಿದೇನೆ. ಆದರೂ ನನ್ನ ಕೈಯಲ್ಲಾದ ಉಪಕಾರವು ನಿಮಗೇನಾದರೂ ಆಗಬೇಕಾದರೆ ನನ್ನ ಪ್ರಾಣಗಳಿಗೂ ಆಶೆಪಡದೆ ಮಾಡುವುದಕ್ಕೆ ಸಿದ್ಧವಾಗಿದೇನೆ. ನೀವೀಗೆಲ್ಲಿಗೆ ಹೋಗುತ್ತೀರಿ?

ರಾಜಶೇಖರ—ಕಾಶೀಯಾತ್ರೆಗಾಗಿ ಹೊರಟದೇವೆ.

ರಾಮರಾಜ—ಈ ಬೇಸಗೆಗಾಲ ಪ್ರಯಾಣಕ್ಕೆಷ್ಟುಮಾತ್ರವೂ ಒಳ್ಳೆಯ ಸಮಯವಲ್ಲ. ಈಬಿಸಿಲಲ್ಲಿ ನೀವು ಬಿದ್ದು ಹೋದೀರಿ.

ದಾರಿಯುದ್ದಕ್ಕೂ ಕಳ್ಳರ ಭಯವು ವಿಶೇಷ. ನಿಮಗೆ ರಾಜಮಹೇಂದ್ರ ವರದಲ್ಲಾದರೂ ಬಂಧುಗಳಿದಾರೆಯೋ? ಇಲ್ಲದೆ ನಿಮಗದೇ ನಿವಾಸಸ್ಥಳವೋ?

ರಾಜಶೇಖರ—ಗೋಟೇಟಿರಾಮಮೂರ್ತಿಯವರನ್ನು ನೀವು ಬಲ್ಲಿರಾ? ಆತನು ನಮ್ಮ ಚಿಕ್ಕಪ್ಪನ ಕುಮಾರನು. ಅವರ ಮನೆಯಲ್ಲಿ ನಾನು ಹದಿನೈದುದಿನಗಳಿದ್ದು ಹೊರಟುಬಂದೆನು; ನಮ್ಮ ಸ್ವಸ್ಥಳವು ಧವಳೇಶ್ವರ.

ರಾಮರಾಜ.—ನಿಮ್ಮ ಹೆಸರೇನು? ಇವರೆಲ್ಲರೂ ನಿಮಗೇನಾಗಬೇಕು?

ರಾಜಶೇಖರ—ನನ್ನ ಹೆಸರು ರಾಜಶೇಖರ; ಅವನು ನನ್ನ ಮಗ; ಆಹೆಣ್ಣುಹುಡುಗರಿಬ್ಬರೂ ನನ್ನ ಕುಮಾರಿಯರು; ಅವಳು ನನ್ನ ಭಾರ್ಯೆ.

ರಾಮರಾಜ—ನೀವಿಷ್ಟು ಬೇಸಗೆಗಾಲದಲ್ಲಿ ಯಾತ್ರೆಹೊರಡುವುದಕ್ಕೆ ಕಾರಣವೇನು? ನಿಮ್ಮ ವೈಖರಿಯನ್ನು ನೋಡಿದರೆ ನೀವು ಮಿಗಿಲು ಸುಖವನ್ನನುಭವಿಸಿದವರಂತೆ ಕಾಣಿಸುತ್ತೀರಿ.

ರಾಜಶೇಖರ—ನಾನು ಮೊದಲು ಧನಿಕನಾಗಿಯೇ ಇದ್ದೆನು. ಆದರೆ, ನನ್ನಲ್ಲಿದ್ದ ಹಣವೆಲ್ಲವನ್ನೂ ನನ್ನ ಮಗಳ ವಿವಾಹದಲ್ಲಿ ಕೊಟ್ಟ ಸಂಭಾವನೆಗಳಲ್ಲೂ ಮುಖಸ್ತುತಿಮಾಡುವ ಮೋಸಗಾರರಿಗೆ ಮಾಡಿದ ದಾನಗಳಲ್ಲೂ ವೆಚ್ಚಮಾಡಿ ಬಡವನಾಗಿ, ಕಡೆಯಲ್ಲಿ ಯಾತ್ರೆಗೆ ಹೊರಟೆನು. ನಾನು ನಿತ್ಯ ಅವರ ಸ್ತುತಿಪಾಠಗಳನ್ನು ಸ್ವೀಕರಿಸಿ ತುಷ್ಟಿಹೊಂದುತಿದ್ದೆನು; ಅವರು ನನ್ನ ಧನವನ್ನು ಸ್ವೀಕರಿಸಿ ತೃಪ್ತಿಹೊಂದುತಿದ್ದರು. ಕೊನೆಗೆ ಒಬ್ಬ ಬೈರಾಗಿ ಚಿನ್ನವನ್ನು ಮಾಡುತೇನೆಂದು ನನ್ನಲ್ಲಿದ್ದ ಬೆಳ್ಳಿಬಂಗಾರಗಳನ್ನಪಹರಿಸಿ ಅವಕ್ಕೆ ಬದಲಾಗಿ ಕೊಂಚ ಬೂದಿಯನ್ನುಕೊಟ್ಟು ಹೋಗಿ ನನ್ನನ್ನು ನಿಜವಾದ ಜೋಗಿಯಾಗಿ ಮಾಡಿದನು.

ರಾಮರಾಜ—ಮೊದಲಾವಾಗಲೂ ನೀವು ದೂರದೇಶಪ್ರಯಾಣಗಳನ್ನು ಮಾಡಿದವರಲ್ಲ. ನನ್ನ ಮಾತುಕೇಳಿ ನೀವು ಈಬೇಸಗೆ

ಗಾಲ ಕಳೆದು ಹೋಗುವವರೆಗಾದರೂ ಭೀಮವರದಲ್ಲಿ ಇರಿ. ಅದು
ಮಹಾಪುಣ್ಯಕ್ಷೇತ್ರ ; ಭೀಮನದೀಸಮೀಪದಲ್ಲಿ ಭೀಮೇಶ್ವರಸ್ವಾಮಿಯ
ವರ ಆಲಯವಿದೆ ; ಅದಕ್ಕೂ ಪೆದ್ದಾಪುರಕ್ಕೂ ಕೋಸುದೂರವಿದೆ.
ಪೆದ್ದಾಪುರವನ್ನು ಪಾಲಿಸುತಿರುವ ಕೃಷ್ಣಗಜಪತಿಮಹಾರಾಜರವರು
5 ಮಹಾಧರ್ಮಾತ್ಮರು ; ಅವರು ತಮ್ಮ ಪ್ರಜೆಗಳ ಕ್ಷೇಮವನ್ನು
ವಿಚಾರಿಸುವ ನಿಮಿತ್ತವಾಗಿ ಮಾರುವೇಷವನ್ನು ಹಾಕಿಕೊಂಡು ತಿರು
ಗುತಿರುವರು ; ಅವರ ಬಳಿಯಲ್ಲಿ ನಮ್ಮ ಬಂಧುವೊಬ್ಬನು ದೊಡ್ಡ
ಕೆಲಸದಲ್ಲಿದಾನೆ. ನೀವು ಭೀಮವರದಲ್ಲಿ ಇರುವುದಾದರೆ, ನಮ್ಮವನ
ಸಂಗಡ ಮಾತಾಡಿ ಸಮಯ ಬಂದಾಗ ನಿಮಗೊಂದುದ್ಯೋಗವನ್ನು
10 ಮಾಡಿಸಿ ಕೊಡುವೆನು.

ರಾಜಶೇಖರನು ಒಳ್ಳೆಯವನಾದುದರಿಂದ ಪೆದ್ದಾಪುರಕ್ಕೆ ಹೋ
ದಮೇಲೆ ಆಲೋಚಿಸುವೆನೆಂದು ಆಗ್ಗೆ ಹೇಳಿದನಾದರೂ, ಅರಸನ ಸ್ಥಿತಿ
ನೋಡಿ ಆತನು ಉದ್ಯೋಗವನ್ನು ಮಾಡಿಸುವನೆಂಬಾಶೆಯನ್ನು
ಮಾತ್ರ ಇಟ್ಟುಕೊಂಡವನಾಗಲಿಲ್ಲ. ಈಮಾತುಗಳು ಮುಗಿಯುವ
15 ವರೆಗೆ ಅವರು ಗ್ರಾಮವನ್ನು ಸಮೀಪಿಸಿದರು.

ರಾಜಶೇಖರ—ಆಗಿಡಗಳಿಗೆ ಗ್ರಾಮವೆಷ್ಟುದೂರ ?

ರಾಮರಾಜ—ಗ್ರಾಮದ ಸಮೀಪಕ್ಕೆ ಬಂದಿದೇವೆ. ಆಗಿಡಗಳು
ಕೆರೆಯ ಕಟ್ಟೆಯಮೇಲಿನವು. ಕೆರೆಗಿದಿರಾಗಿಯೇ ಸತ್ರವಿದೆ.

ರಾಜಶೇಖರ—ನೀವೀಹೊತ್ತು ನಮ್ಮಲ್ಲಿ ಭೋಜನಮಾಡುವಿರಾ ?

20 ರಾಮರಾಜ—ನನಗೆ ಗ್ರಾಮದಲ್ಲಿ ಬಂಧುಗಳಿದಾರೆ ; ಅಲ್ಲಿಗೆ
ಹೋಗಿ ಭೋಜನಮಾಡಿ, ತಣ್ಣನೆಹೊತ್ತಿನಲ್ಲಿ ಮೆಲ್ಲಗೆ ಹೊರಟು
ಬರುವೆನು. ನೀವು ಸ್ತ್ರೀಯರೊಂದಿಗೆ ಹೊರಟಿದ್ದೀರಾದಕಾರಣ
ಭೋಜನಮಾಡಿದ ಕೂಡಲೇ ಪಯಣವಾಗಿ ಹೊತ್ತು ಮುಳುಗುವು
ದಕ್ಕೆ ಮುಂಚೆಯೇ ವೇಡಿಮಂಗಲವನ್ನು ದಾಟಿ ಹೋಗಬೇಕು. ಅಲ್ಲಿ
25 ಕಳ್ಳರ ಭಯ ವಿಸ್ತಾರ. ನೀವು ಹೇಗಾದರೂ ಶ್ರಮಪಟ್ಟು ಕತ್ತಲಾ
ಗುವುದಕ್ಕೆ ಮುಂಚೆಯೇ ಪೆದ್ದಾಪುರವನ್ನು ಸೇರಿ ಒಂದು ದಿವಸ ಅಲ್ಲಿ
ನಿಲ್ಲಿರಿ. ನಾನು ಮಿಗಿಲುಬಳಲಿದೇನಾದಕಾರಣ ನಿಮ್ಮ ಸಂಗಡ

ಈಗಲೇ ಬರಲಾರೆನು. ನಾಳೆಯದಿನ ಬಂದು ನಿಮ್ಮಲ್ಲಿ ಕಲಿತುಕೊಳ್ಳುವೆನು.

ಎಂದು ರಾಜಶೇಖರನಿಗೆ ನಮಸ್ಕಾರಮಾಡಿ, ಎಲ್ಲರಲ್ಲೂ ಅಪ್ಪಣೆ ತೆಗೆದುಕೊಂಡು, ದಾರಿಯಲ್ಲಿ ಭದ್ರವೆಂದು ಬಲುಬಾರಿ ಹೇಳಿ, ರಾಮರಾಜನು ತನ್ನ ದಾರಿಯಲ್ಲಿ ಹೋದನು. ಅಡಿಗೆಯಾದ ತರುವಾಯ ಭೋಜನಮಾಡಿ ಅವರೆಲ್ಲರೂ ಹೊರಟು ಬಿಸಿಲಿನಿಂದ ಮೈಯಲ್ಲೆಲ್ಲ ಬೆವರು ಹಿಡಿಯೆ, ಹೆಜ್ಜೆಹೆಜ್ಜೆಗೂ ತಂಬಿಗೆನೀರುಕುಡಿಯುತ್ತ, ನಡುನಡುವೆ ವೃಕ್ಷಚ್ಛಾಯೆಗಳಲ್ಲಿ ನಿಲ್ಲುತ್ತ, ಹೆಜ್ಜೆಗೊಂದು ಗಾವುದವಾಗಿ ನಡೆದು ನಾಲ್ಕುಗಳಿಗೆಯು ಹೊತ್ತಿರುವಾಗ ನಲ್ಲಚೆರುವೆಂಬ ಕೆರೆಯ ಬಳಿಗೆ ಬಂದರು. ಆ ಕೆರೆಯ ಕಟ್ಟೆಯ ಕೆಳಗಡೆಯಿದ್ದ ಬಸರಿಯಗಿಡದಕೆಳಗೆ ತಾಳೆಗರಿಗಳ ಹಂದರದಲ್ಲಿ ದೇಹದತುಂಬ ವಿಭೂತಿಯನ್ನು ಬಳಿದುಕೊಂಡು ಕಂಠದಲ್ಲೂ ಕೈಯಲ್ಲೂ ಶಿರಸ್ಸಿನಲ್ಲೂ ರುದ್ರಾಕ್ಷಮಾಲೆಗಳನ್ನು ಧರಿಸಿಕೊಂಡು ಕುಳಿತಿದ್ದ ಒಬ್ಬ ಯೋಗಿಯು ಅವರನ್ನು ಕೈಸನ್ನೆಮಾಡಿ ಕರೆದು, ಹತ್ತಿರ ಹಾಸಿದ್ದ ಚಾಪೆಯ ಮೇಲೆ ಕುಳಿತುಕೊಳ್ಳಿರೆಂದು ನಿಯೋಗಿಸಿ ಬಲಗೈಯಲ್ಲಿದ್ದ ತುಲಸೀಮಣಿಗಳ ಸರವನ್ನು ತಿರುಗಿಸುತ್ತ ಬಾಯಲ್ಲೇನೋ ಜಪಿಸಿಕೊಳ್ಳುತ್ತ ನಡುನಡುವೆ ಒಂದೊಂದುಪ್ರಶ್ನೆ ಹಾಕಲಾರಂಭಿಸಿದನು.

ಯೋಗಿ—ಮಾರ್ಗಸ್ಥರೇ ? ನೀವು ಬಿಸಿಲಿನಲ್ಲಿ ನಡೆದು ಮಾರ್ಗಾಯಾಸದಿಂದ ಬಳಲಿದೀರಿ. ಕೊಂಚಹೊತ್ತಿಲ್ಲಿ ವಿಶ್ರಮಿಸಿಕೊಂಡು ಹೋಗಿ. ಸಕುಟುಂಬವಾಗಿ ಹೊರಟಿರುವಂತಿದೆ. ನೀವೆಲ್ಲಿಗೆ ಹೋಗುವಿರಿ ?

ರಾಜಶೇಖರ—ಕಾಶೀಯಾತ್ರೆಹೋಗುತ್ತೇವೆ.

ಯೋಗಿ—ಅಷ್ಟುದೂರದೇಶಯಾತ್ರೆ ಧನವಂತರಿಗಲ್ಲದೆ ಲಭಿಸದು. ದಾರಿಯುದ್ದಕ್ಕೂ ಸತ್ರಗಳಿಲ್ಲ. ನೀವೇನಾದರೂ ಧನವನ್ನು ಶೇಕರಿಸಿಕೊಂಡು ಹೊರಟಿದೀರಿಯಲ್ಲವೆ ?

ರಾಜಶೇಖರ—ನಮ್ಮಂತಹ ಬಡವರಿಗೆ ವಿಶೇಷಧನವೆಲ್ಲಿಂದ ಬಂದೀತು ? ಆದರೂ ನಾವು ನೂರುರೂಪಾಯಿಗಳ ರೊಕ್ಕವನ್ನು

ತಂದುಕೊಂಡಿದ್ದೇವೆ. ಹೇಗಾದರೂ ಅದರಲ್ಲೇ ಗಂಗಾಯಾತ್ರೆಮಾಡಿ ಕೊಂಡು ಬರಬೇಕೆಂದಿದ್ದೇವೆ.

ಯೋಗಿ—ನೀವು ಬಹುಜಾಗರೂಕತೆಯಿಂದಿರಬೇಕು. ಇಲ್ಲಿಗೆ ಎರಡುಕೋಸುದೂರದಲ್ಲಿರುವ ವೇಡಿಮಂಗಲದ ಹತ್ತಿರ ಮಾರ್ಗ
5 ಸ್ಥರನ್ನು ಕಳ್ಳರು ಹೊಡೆಯುತ್ತಿರುವರು. ಗಳಿಗೆಹೊತ್ತು ತಾಳಿದರೆ ನಮ್ಮ ಶಿಷ್ಯರನ್ನು ಜೊತೆಯಲ್ಲಿ ಕೊಟ್ಟು ಕಳುಹುವೆವು.

ಎಂದು ಹೇಳಿ ಆಯೋಗಿ ಜಪಸರವನ್ನು ತಿರುಗಿಸುತ್ತ ಮರಳಿ ಜಪಮಾಡುವುದಕ್ಕಾರಂಭಿಸಿದನು. ಎಷ್ಟು ಹೊತ್ತಿಗೂ ಆತನ ಶಿಷ್ಯರು ಬರಲಿಲ್ಲವಾದುದರಿಂದ, ರಾಜಶೇಖರನು ಮನಸ್ಸಿನಲ್ಲಿ ತೊಂದರೆ
10 ಪಡುತ್ತಿದ್ದನು. ಹೊತ್ತೂ ಆದುವರೆಗೆ ಮಾಲುತ ಬಂತು.

ರಾಜಶೇಖರ—ಸ್ವಾಮೀ ! ನಿಮ್ಮ ಶಿಷ್ಯರಿದುವರೆಗೂ ಬರಲಿಲ್ಲ. ಎರಡುಗಳಿಗೆಯಹೊತ್ತಿದೆ. ಬೇಗನೆ ವರ್ತಮಾನವನ್ನು ಹೇಳಿ ಕಳುಹುವಿರಾ ?

ಯೋಗಿ—ಅವಶ್ಯವಾಗಿ ಕಳುಹುವೆವು.

15 ಎಂದು ತಟ್ಟನೆ ಎದ್ದು ಬಸರಿಯ ಗಿಡಕ್ಕೆ ನೂರುಮಾರುಗಳ ದೂರದಲ್ಲಿದ್ದ ಗುಡಿಸಲಿನ ಹತ್ತಿರಕ್ಕೆ ಹೋಗಿ 'ಗೋಪಾಲಿಗಾ' ಎಂದು ಕೂಗುಕೂಗಿದನು. ಒಳಗಿನಿಂದ ಹರಕುಬಟ್ಟೆಯನ್ನುಟ್ಟು ಕೊಂಡು ಇದ್ದಲಿನಂತಿರುವ ಶರೀರವೂ ಬುರುಡೆಮೂಗೂ ಉಬ್ಬಿದ ಹಣೆಯೂ ಗೊಗ್ಗರಹಲ್ಲೂ ಉಳ್ಳವನೊಬ್ಬ ಕಿರಾತನು ಹೊರಗೆ
20 ಬಂದನು. ಅವನಸಂಗಡ ಏನೇನೋ ಮಾತಾಡುತ ತನ್ನ ಹಂದರದ ವರೆಗೂ ಕರೆದುಕೊಂಡು ಬಂದು, ರಾಜಶೇಖರನು ಕೇಳುವಂತೆ 'ಇವ ರಿಗೆ ಸಹಾಯವಾಗಿ ಕಳುಹುವುದಕ್ಕಾಗಿ ನಮ್ಮವರನ್ನು ಕರೆದುಕೊಂಡು ಈಗಲೇ ಬಾ' ಎಂದು ಕಳುಹಿದನು.

ರಾಜಶೇಖರ—ಸ್ವಾಮೀ ! ನಿಮ್ಮ ಶಿಷ್ಯರೆಷ್ಟುಹೊತ್ತಿಗೆ ಬರು
25 ವರೊ. ಕತ್ತಲೆ ಕವಿಯುವುದಕ್ಕೆ ಮುಂಚೆಯೇ ವೇಡಿಮಂಗಲ ವನ್ನು ದಾಟಿ ಹೋಗಬೇಕು. ನಾವು ನಡೆಯುತ್ತಿರೋಣವೇ ?

ಯೋಗಿ—ಅಹುದು. ನೀವು ಹೇಳಿದ ಮಾತು ನಿಜವೇ. ನೀವು
ನಡೆಯುತಿರಿ. ಅವರು ಬಂದು ನಿಮ್ಮನ್ನೀಗಲೇ ಕಲೆತುಕೊಳ್ಳುವರು.

ಆಗ ರಾಜಶೇಖರನು ಹೆಂಡತಿಮಕ್ಕಳೊಂದಿಗೆ ಹೊರಟು ಕಳ್ಳರ
ಹೆಸರು ಜ್ಞಾಪ್ತಿಗೆ ಬಂದಾಗೆಲ್ಲ ಗುಂಡಿಗೆ ತಟತಟನೆ ಹೊಡೆದುಕೊಳ್ಳುತಿರೆ,
ಬುಜದ ಮೇಲಿನ ಗಂಟನ್ನು ಬಲುಬಾರಿ ತಡವಿ ನೋಡಿಕೊಳ್ಳುತ, 5
ಇರುವೆ ಇರುಕ್ಕೆಂದರೆ ಹಿಂದಿರುಗಿ ನೋಡುತ, ಎಲೆಯಲುಗಿದರೂ
ಬೆಟ್ಟಿಬೀಳುತ ನಡೆಯುತಿದ್ದನು. ಆಯೋಗಿಯಿಂದ ಕಳುಹಲ್ಪಟ್ಟ
ಕಿರಾತನೂ ವೇಗವಾಗಿ ನಡೆದುಹೋಗಿ ದಾರಿಯಲ್ಲೊಂದುಕಡೆ ಚೆನ್ನಾಗಿ
ಹೆಂಡಕುಡಿದು ಮಾಲುತ್ತ ತಲೆನಡುಗಿಸುತ್ತ ಹುಣಿಸೆಯ ಕೆಂಡಗಳಂತಿ
ರುವ ಗುಡ್ಡೆಗಳನ್ನು ತಿರುಗಿಸುತ್ತ ಸಂಕೇತಸ್ಥಲವನ್ನು ಸೇರಿ, 10
ಅಲ್ಲೊಂದುಗುಡಿಸಿಯಲ್ಲಿ ನಿದ್ದೆಮಾಡುತಿದ್ದ ಮನುಷ್ಯನನ್ನು
ಕೈಯಿಂದ ತಟ್ಟಿ ಎಬ್ಬಿಸಿ, "ಎಲೊ! ಒಬ್ಬ ಬ್ರಾಹ್ಮಣನೂ
ಮಗನೂ ಭಾರ್ಯೆಯೂ ಇಬ್ಬರು ಹೆಣ್ಣುಮಕ್ಕಳೂ ನೂರುರೂಪಾಯಿ
ಗಳೊಂದಿಗೆ ಹೋಗುತಿದಾರೆಯಾದುದರಿಂದ ನೀವು ಚೀಮಲಚಿಂತದ
ಹತ್ತಿರಕ್ಕೆ ಬೇಗನೆ ಹೋಗಬೇಕೆಂದು ನಮ್ಮಗುರುಗಳು ಹೇಳಿದರು" 15
ಎಂದು ಹೇಳಿ ಹೋದನು. ಆತನು ಆಮಾತನ್ನು ಕೇಳಿದ ಕೂಡಲೇ
ಕೊಂಚ ಹೊತ್ತು ಏನೋ ಆಲೋಚಿಸಿ ಸಂತೋಷಪೂರ್ವಕವಾಗಿ
ಎದ್ದು, ಆ ದಾರಿಗಳನ್ನೂ ಸಂಕೇತಸ್ಥಲಗಳನ್ನೂ ಅರಿತವನಾದುದರಿಂದ
ಮರುಮಾತನಾಡದೆ ಕತ್ತಿಯನ್ನು ಕೈಯಲ್ಲಿ ಹಿಡಿದುಕೊಂಡು ಗುಡಿ
ಸೆಯಿಂದ ಹೊರಟನು. ಆ ಕಿರಾತನು ಅಡ್ಡದಾರಿಯಲ್ಲಿ ಹೋಗಿ 20
ಮಾರ್ಗದಲ್ಲಿ ಸಿಕ್ಕಿದ ಮತ್ತೊಬ್ಬನ ಸಂಗಡಲೂ ಹೇಳಿ ಮರಳಿ ಯೋಗಿ
ಯನ್ನು ನೋಡಿ ಆತನ ಅಪ್ಪಣೆಯ ಪ್ರಕಾರವಾಗಿ ಬಿಲ್ಲನ್ನೂ ಬಾಣ
ಗಳನ್ನೂ ಧರಿಸಿ ಆವರನ್ನು ಮಾರ್ಗದಿಂದ ತಪ್ಪಿಸಿ ಚೀಮಲಚಿಂತದ
ಹತ್ತಿರಕ್ಕೆ ಕರೆದುಕೊಂಡು ಹೋಗುವುದಕ್ಕಾಗಿ ಓಡುತ ಹೋಗಿ
ಸಂಜೆಗತ್ತಲೆಯಹೊತ್ತಿಗೆ ಆವರನ್ನೊದಗಿಸಿಕೊಂಡನು. 25

ಕಿರಾತ—ಅಯ್ಯಾ! ಶಿಷ್ಯರು ಬರಲಿಲ್ಲವಾದುದರಿಂದ ನಮ್ಮ ಗುರು
ಗಳವರು ನಿಮ್ಮ ಮೈಗಾವಲಿಗಾಗಿ ನನ್ನನ್ನು ಕಳುಹಿಂದಾರೆ. ಬಳ್ಳಿಯು

ಸಮಯಕ್ಕೆ ಬಂದು ನಿಮ್ಮೊಂದಿಗೆ ಕಲೆತೆನು. ಕಳ್ಳರು ಹೊಡೆಯುವ
ಸ್ಥಳಕ್ಕೆ ಸಮೀಪದಲ್ಲಿದೇವೆ. ಆದರೂ ನಮಗೇನೂ ಭಯವಿಲ್ಲ.
ನಾವೀಮಾರ್ಗವನ್ನು ಬಿಟ್ಟು ಸೀಳುದಾರಿಯಲ್ಲಿ ಹೋಗಿ ಭಯಪಡ
ಬೇಕಾದ ಸ್ಥಳವನ್ನು ದಾಟಿದ ತರುವಾಯ ದೊಡ್ಡ ಭಾಟೆಗೆ ಹೋಗಿ
5 ಸೇರೋಣ.

ರಾಜಶೇಖರ—ಹೇಗಾದರೂ ನಮ್ಮನ್ನು ಸುಖವಾಗಿ ಕರೆದು
ಕೊಂಡು ಹೋಗಬೇಕಾದ ಭಾರ ನಿನ್ನದು. ನೀನಾವದಾರಿಯಲ್ಲಿ
ಬನ್ನಿ ಎಂದು ಹೇಳುತೀಯೊ ಆದಾರಿಯಲ್ಲೇ ಬರುತೇವೆ.

ಆಗ ಆಕಿರಾತನು ಅವರನ್ನು ದೊಡ್ಡದಾರಿಯಿಂದ ತಪ್ಪಿಸಿ
10 ಸಣ್ಣದಾರಿಯಲ್ಲಿ ಸಂಗಡ ಕರೆದುಕೊಂಡು ಹೋಗುತಿದ್ದನು. ಇಷ್ಟ
ರೊಳಗೆ ಮಬ್ಬು ಹಿಡಿದು ದಾರಿ ಕಾಣಬಾರದೆ ಗಾಢಾಂಧಕಾರಬಂಧುರ
ವಾಗಿತ್ತು. ಗಿಡಗಳಮೇಲಿನ ಹಕ್ಕಿಗಳ ಕಲಕಲಗಳು ನಿಂತಿದ್ದರೂ
ಗೂಬೆ ಮುಂತಾದ ಕೆಲವು ಪಕ್ಷಿಗಳು ಮಾತ್ರ ಮೇವಿಗಾಗಿ ಸಂಚರಿಸು
ತಿದ್ದುವು; ಕಣಕಪಟಗಳು ಕೀಚುಕೀಚೆಂದು ದಶದಿಕ್ಕುಗಳಲ್ಲೂ ಧ್ವನಿ
15 ಮಾಡತೊಡಗಿದುವು; ಅಡವಿಮೃಗಗಳ ಕೂಗುಗಳೂ ಹಾವುಗಳ
ಫೂತ್ಕಾರಗಳೂ ಕರ್ಣಕಠೋರವಾಗಿ ಕೇಳಬರುತಿದ್ದುವು. ನಡು
ನಡುವೆ ಮೇಘಗಳಲ್ಲಿ ತಳಕ್ಕೆಂದು ಮಿಂಚು ಮಿಂಚಿ ಕೊಂಚ ದಾರಿ
ಕಾಣಬರುತಿತ್ತು. ಈರೀತಿಯಲ್ಲಿ ಸ್ವಲ್ಪ ದೂರ ನಡೆದ ತರುವಾಯ
ದೂರದಲ್ಲಿ ಬೆಳಕು ಕಾಣಬಂತು; ಆಬೆಳಕು ಸಮೀಪಿಸಿದ ಹಾಗೆಲ್ಲ
20 ದೊಡ್ಡ ಉರಿಯಾಗಿ ಏರ್ಪಡುತ್ತಾ, ಬಂದು ದೊಡ್ಡ ಹುಣಿಸೆಯಗಿಡಕ್ಕೆ
ಸಮೀಪವಾಗಿತ್ತು. ಕತ್ತಲೆಯಲ್ಲಿ ಈಪ್ರಕಾರವಾಗಿ ನಡೆಯುತಿರು
ವಾಗ ರಾಜಶೇಖರನ ಪ್ರಾಣಗಳಾತನ ದೇಹದಲ್ಲಿರಲಿಲ್ಲ; ಮಿಕ್ಕವರೂ
ಪ್ರಾಣಗಳನ್ನಂಗೈಯಲ್ಲಿಟ್ಟುಕೊಂಡು ಕಾಲುಗಳನ್ನೆಳೆದುಕೊಂಡು ನಡೆ
ಯುತಿದ್ದರು. ಈರಾತ್ರಿಯಾಪತ್ತಿನಿಂದ ತಪ್ಪಿಸಿಕೊಂಡು ಯಾವುದಾ
25 ದರೂ ಒಂದೂರನ್ನು ಸೇರಿದರೆ ಇನ್ನಾವಾಗಲೂ ದಾರಿಪಯಣವನ್ನು
ಮಾಡೆವೆಂದು ಎಲ್ಲರೂ ನಿಶ್ಚಯಮಾಡಿಕೊಂಡರು. ಊರುಸೇರಿದ
ತರುವಾಯ ಗ್ರಾಮದೇವತೆಗೆ ಮೇಕೆಯ ಹೋತನನ್ನು ಕೊಡಿಸುವೆ

ನೆಂದು ಮಾಣಿಕ್ಯಾಂಬೆ ಪ್ರಾರ್ಥನೆಮಾಡಿಕೊಂಡಳು. ಈಪ್ರಕಾರ
ವಾಗಿ ವ್ಯಾಕುಲಪಡುತ ಅವರು ನಡೆದು ಬಂದು ವಿಶಾಲಸ್ಥಲವನ್ನು ಸೇರು
ವಾಗ್ಗೆ, ಹುಣಿಸೆಯಗಿಡದ ಕೆಳಗಿನ ಉರಿಯ ಮುಂದೆ ಕುಳತಿದ್ದ ಎರಡು
ವಿಗ್ರಹಗಳು ಎದ್ದು ಮೈತುಂಬ ಕಂಬಳಿಗಳನ್ನು ಹೊದೆದುಕೊಂಡು
ಬಾಯಲ್ಲಿ ಹೊಗೆಸುತ್ತನ್ನು ಹತ್ತಿಸಿಕೊಂಡು ಬುಜಗಳಮೇಲೆ ದೊಣ್ಣೆ
ಗಳನ್ನಿಟ್ಟುಕೊಂಡು ಅವರ ಕಡೆಗೆ ನಡೆಯಲಾರಂಭಿಸಿದುವು. ಇವ
ರನ್ನು ನೋಡಿದ ಕೂಡಲೇ ಅವರೆಲ್ಲರಿಗೂ ಮೇಲಿನ ಪ್ರಾಣಗಳು
ಮೇಲಕ್ಕೇ ಹೋದುವು; ಹಿಂದುಗಡೆ ಇದ್ದ ಕಿರಾತನು ಕಳ್ಳರೆಂದು
ಕೂಗುಹಾಕಿ ಹಿಂದಿದ್ದವನು ಹಿಂದಕ್ಕೇ ಓಡಿಹೋದನು. ಇಷ್ಟರೊ
ಳಗಾಕಳ್ಳರಲ್ಲೊಬ್ಬನು ಮುಂದೆ ಬಂದು ಎರಡು ಕೈಗಳಿಂದಲೂ ದೊಣ್ಣೆ
ಯನ್ನು ಹಿಡಿದುಕೊಂಡು ಮಾತಾಡದೆ ಮುಂದುಗಡೆ ಇದ್ದ ರುಕ್ಮಿ
ಣಿಯ ನೆತ್ತಿಯ ಮೇಲೆ ತನ್ನ ಸತ್ವವಿದ್ದಷ್ಟೂ ಒಂದು ಪೆಟ್ಟನ್ನು ಹಾಕಿ
ದನು. ಆಪೆಟ್ಟಿನಿಂದ ಬುಡವನ್ನು ಕಡಿದ ಬಾಳೆಯ ಗಿಡದಂತೆ ರುಕ್ಮಿಣಿ
ನೆಲಕ್ಕೆ ಬಿದ್ದು ನಿಶ್ಚೇಷ್ಟಳಾಗಿ ಹೋದಳು. ಅಷ್ಟರಲ್ಲಾರೋ
ಒಬ್ಬನು ಕತ್ತಿಹಿರಿದು "ತಾಳು" "ತಾಳು" ಎಂದು ಕೂಗುತ್ತ,
ಮಿಂಚು ಮಿಂಚಿದಂತೆ ಮೇಲೆಬಿದ್ದು ಕಳ್ಳರಲ್ಲೊಬ್ಬನಮೇಲೆ ಖಡ್ಗ
ದಿಂದ ಹಾಕಿದನು. ಆಪೆಟ್ಟಿನಿಂದ ಶಿರಸ್ಸು ಚೆಂಡಿನಂತೆ ಮೇಲಕ್ಕೆಗರಿ
ದೂರವಾಗಿ ಬಿತ್ತು; ಮುಂಡವು ಭೂಮಿಯಮೇಲೆ ಬಿದ್ದು ಚಿಲ್ಲಂ
ಗೋವಿಯಿಂದ ಚಿಮ್ಮದಂತೆ ರಕ್ತಧಾರೆಗಳು ಪ್ರವಹಿಸೆ ಕಾಲುಗಳಿಂ
ದಲೂ ಕೈಗಳಿಂದಲೂ ವಿಲವಿಲಹೊಡೆದುಕೊಳ್ಳುತಿತ್ತು. ಶತ್ರುವು
ಆಯುಧಪಾಣಿಯಾಗಿರೋಣವೂ, ತಾನೊಬ್ಬನಾಗಿರೋಣವೂ, ದಾರಿ
ಗರಲ್ಲಿಬ್ಬರುಗಂಡಸರಿರುವುದೂ ನೋಡಿ, ಕಿರಾತನೊಂದಿಗೆ ಕೂಡಿ
ಕೊಂಡು ಎರಡನೆಯ ಕಳ್ಳನು ಕಾಲಿಗೆ ಬುದ್ಧಿಹೇಳಿದನು. ಖಡ್ಗಪಾ
ಣಿಯಾದ ಪುಣ್ಯಾತ್ಮನು ಅವರನ್ನು ಕೊಂಚದೂರದವರೆಗೂ ಬೆನ್ನು
ಹತ್ತಿಹೋದರೂ ಅವರೊಂದುನಿಮಿಷದಲ್ಲಿ ಬಹುದೂರ ಓಡಿಹೋಗಿ
ಅದೃಶ್ಯರಾದಕಾರಣ ಹಿಂದಕ್ಕೆ ಬಂದು ರಾಜಶೇಖರನೊಂದಿಗೆ ಕಲೆತು
ಕೊಂಡನು.

ರಾಮರಾಜ—ರಾಜಶೇಖರಯ್ಯನವರೇ ! ಹೊತ್ತಿರುವಾಗಲೆ ಈಸ್ಥಲವನ್ನು ದಾಟಿ ಹೋಗಬೇಕೆಂದು ನಾನು ಮಧ್ಯಾಹ್ನದಲ್ಲೇ ಬಹು ವಿಧವಾಗಿ ಬೋಧಿಸಿದೆನಲ್ಲವೆ ? ನೀವು ನನ್ನ ಮಾತನ್ನು ಲಕ್ಷ್ಯಮಾಡದೆ ಈಯಪಾಯವನ್ನು ತಂದಿಟ್ಟುಕೊಂಡಿರಿ.

5 ರಾಜಶೇಖರ—ಓ ಹೋ ಹೊ ! ರಾಮರಾಜರವರೇ ! ನೀವು ನಮ್ಮಪಾಲಿನ ದೈವದಂತೆ ಸಮಯಕ್ಕೆ ಬಂದು ನಮ್ಮೆಲ್ಲರ ಪ್ರಾಣಗಳನ್ನೂ ಕಾಪಾಡಿದಿರಿ. ನೀವಿನ್ನೊಂದುನಿಮಿಷ ಬಾರದಿದ್ದರೆ ನಾವೆಲ್ಲರೂ ಆದುರ್ಮಾರ್ಗರ ಕೈಯಲ್ಲಿ ಸಿಕ್ಕಿಹೋಗುತಿದ್ದೆವು. ನೀವು ಈಗ ಇಲ್ಲಿಗೆ ಹೇಗೆ ಬಂದಿರಿ ?

10 ರಾಮರಾಜ—ನಿಮ್ಮ ಸಂಗಡ ಬಂದ ಕಿರಾತನು ಕಳ್ಳರನ್ನು ಕರೆದು ಕೊಂಡು ಬರುವುದಕ್ಕಾಗಿ ಯೋಗಿಯಿಂದ ಕಳುಹಲ್ಪಟ್ಟು ಬಿಸಿಲಲ್ಲಿ ನಡೆಯಲಾರದೆ ಬಂದುಗುಡಿಸೆಯಲ್ಲಿ ಮಲಗಿದ್ದ ನನ್ನನ್ನು ತಮ್ಮವರಲ್ಲೊಬ್ಬನನ್ನಾಗಿ ಭ್ರಮಿಸಿ ತನ್ನ ಗುರು ಕೆಲವರು ಬ್ರಾಹ್ಮಣರನ್ನು ಸುಲಿದುಕೊಳ್ಳುವುದಕ್ಕಾಗಿ ಈಹುಣಿಸೆಯಮರದಬಳಿಗೆ ಹೋಗುವಂತೆ 15 ಹೇಳಿದನೆಂದು ಎಂದನು. ಆಮಾತನ್ನು ಕೇಳಿದ ಕೂಡಲೇ ಆಬ್ರಾಹ್ಮಣರು ನೀವೇ ಎಂದೂಹಿಸಿ ನನಗಲ್ಲಿ ಕಾಲುನಿಲ್ಲದೆ ಕಳ್ಳರನ್ನು ವಾರಿಸಬೇಕೆಂಬುದ್ದೇಶದಿಂದ ಯೋಗಿಯಿದ್ದ ತಾವಿಗೆ ಹೋದೆನು. ಅಲ್ಲಿ ಅದುವರೆಗೇ ಕಳ್ಳರು ಬಂದು ಯೋಗಿಯಸಂಗಡ ಮಾತಾಡಿ ಹೋದರೆಂಬ ವಾರ್ತೆಯನ್ನು ಕೇಳಿ, ಗುಂಡಿಗೆಯೊಡೆದು ನಾನು ಬರುವುದರೊಳಗೆ 20 ನಿಮಗೇನುಪದ್ರವ ಬರುವುದೊ ಎಂದು ಮಾರ್ಗಾಯಾಸವನ್ನೇನೂ ಲಕ್ಷ್ಯಮಾಡದೆ ಬಂದೋಟದಲ್ಲಿ ಬಂದು ಯುಕ್ತಸಮಯದಲ್ಲಿ ನಿಮಗೆ ಜೊತೆಯಾಗಬೇಕೆಂದಿಚ್ಛಿಸಿ, ನನ್ನ ಜನ್ಮವು ಕೃತಾರ್ಥತೆಯನ್ನು ಹೊಂದಿತಲ್ಲಾ ಎಂದು ಸಂತೋಷಿಸುತ್ತಿದೇನೆ.

ಹೀಗೆ ರಾಮರಾಜನು ಹೇಳುತಿರುವಾಗ ಮಾಣಿಕ್ಯಾಂಬೆ ರುಕ್ಮಿ 25 ಣಿಯನ್ನು ನಖಶಿಖಾಪರ್ಯಂತವೂ ತಡವಿ ನೋಡಿ ಕತ್ತನ್ನೆತ್ತಿ ಅಳಸಾಗಿದಳು. ರಾಮರಾಜನೂ ರಾಜಶೇಖರನೂಕೂಡ ಹತ್ತಿರಕ್ಕೆ ಹೋಗಿ ನೋಡಿ ಹೊಟ್ಟೆಯನ್ನು ಮುಟ್ಟಿನೋಡಿ ಮೂಗಿನಹತ್ತಿರ ಬೆರಳಿಟ್ಟು

ಉಸುರುಕಾಣದೆ ದೆಬ್ಬೆಯಿಂದಲೂ ಭಯದಿಂದಲೂ ಮರಣಹೊಂದಿದ
ಳೆಂದು ನಿಶ್ಚೈಸಿದರು. ರಾಮರಾಜನು ನಾಡಿಯನ್ನು ನಿದಾನಿಸಿ ನೋಡಿ
ಆಕೆ ಸತ್ತಳೆಂದೇ ಸ್ಥಿರಪಡಿಸಿದನು. ಆಗೆಲ್ಲರೂ ಶವದಸುತ್ತೂ ಸೇರಿ
ಪ್ರಲಾಪಿಸುತಿದ್ದರು. ಆಸಮಯದಲ್ಲಿ ಸಮೀಪದಲ್ಲಿ ಹುಲಿಯಕೂ
ಗೊಂದು ಕೇಳಬಂತು. ಆ ಆಪತ್ತಿನಲ್ಲಿ ಸಹಿತ ಆಧ್ವನಿಗೆಲ್ಲರೂ ಬೆದರಿ 5
ನಡುಗುತಿರುವಲ್ಲಿ, ಅವರಿಗೆ ರಾಮರಾಜನು ಧೈರ್ಯಹೇಳಿ, ಕ್ರೂರಮೃಗ
ಗಳಿಂದ ತುಂಬಿದ ಅರಣ್ಯಮಧ್ಯವಾಗಿರುವುದರಿಂದ ನಿಲ್ಲಕೂಡದೆಂದೂ
ಬೆಳಗಾದಮೇಲೆ ಮರಳಿ ಬಂದು ಹೆಣಕ್ಕೆ ದಹನಾದಿಸಂಸ್ಕಾರಗಳನ್ನು
ಮಾಡಬಹುದೆಂದೂ ಬೋಧಿಸತೊಡಗಿದನು. ಹೆತ್ತಮಗಳನ್ನು ಕಾರ
ಡವಿಯಲ್ಲಿ ಬಿಟ್ಟುಬಿಟ್ಟು ಹೊರಡುವುದಕ್ಕೆ ಮನಸ್ಸು ಬಾರದೆ ಅವರು 10
ಆತನ ಮಾತನ್ನು ಕಿವಿಗೆ ಹಾಕಿಕೊಳ್ಳದೆ ರುಕ್ಮಿಣಿಯ ಸುಗುಣಗಳನ್ನು
ನೆನಸಿಕೊಂಡು ಅಳುತಿದ್ದರು. ಅಷ್ಟರಲ್ಲಿ ಇನ್ನಿಷ್ಟುಸಮೀಪದಲ್ಲಿ
ಗಟ್ರೆಂದು ಹುಲಿ ಮರಳಿ ಅರಿಚಿತು. ಆಯೆರಡನೆಯ ಕೂಗಿನಿಂದ
ಸೂರ್ಯಕಿರಣಗಳಿಗೆ ಮಂಜು ಕರಗುವಂತೆ ಅವರ ಧೈರ್ಯಸಾರವು ಕರಗಿ
ಹೋಯಿತು. ಆಗ ರಾಮರಾಜನ ಹಿತಬೋಧೆಯನ್ನಂಗೀಕರಿಸಿ, 15
ಎಷ್ಟೋ ಕಷ್ಟದಿಂದ ರುಕ್ಮಿಣಿಯನ್ನು ಬಿಟ್ಟು, ನಡೆಯುವುದಕ್ಕೆ
ಕಾಲುಬಾರದೆ ಮುಂದಕ್ಕೆ ನಾಲ್ಕುಹೆಜ್ಜೆಯನ್ನಿಟ್ಟು, ಮರಳಿ ಹಿಂದಿರುಗಿ
ನೋಡುತ, ಕೊನೆಗೆ ವಿಧಿಯಿಲ್ಲದೆ ರಾಮರಾಜನ ಸಂಗಡ ಅವರೆಲ್ಲರೂ
ಪೆದ್ದಾಪುರಕ್ಕೆ ಹೋದರು. ತಮ್ಮ ಪ್ರಾಣಗಳಮೇಲೆ ಬಂದಾಗ ಲೋಕ
ದಲ್ಲೆಲ್ಲರೂ ತಾವು ಆದುವರೆಗೆ ಪ್ರಾಣಾಧಿಕರಾಗಿ ನೋಡುತಿರುವರಿಗೆ 20
ಬಂದಾಪದಗಳನ್ನು ಮರೆತುಹೋಗಿ ತಮ್ಮಾಪದವನ್ನು ತಪ್ಪಿಸಿಕೊ
ಳ್ಳುವುದಕ್ಕೆ ಪ್ರಯತ್ನಿಸುವರಲ್ಲವೆ ?

---

# ಶ್ರೀರಾಮಾಭ್ಯುದಯಕಥಾಕುಸುಮಮಂಜರಿ.

## ಸುಂದರಕಾಂಡ.

### ನಾಲ್ಕನೆಯ ಸಂಧಿ.

ಸೂಚನೆ ॥ ವಾರಿಧಿಯ ಭಯಗೊಳಿಸಿ ಕಪಿದು
ರ್ವಾರಬಲದಿಂ ಸೇತುಬಂಧವ
ಪೂರಯಿಸಿ ರಘುನಾಥನಿಂದ ಸುವೇಲಭೂಧರದಿ ॥

ಪದ್ಯ ॥ ಮಹಿಸುತಾಸುತ ಕೇಳಿದೈ ವೋಲ್
ಮಿಹಿರಕುಲಮಣಿ ನೋಡಿ ರಾವಣ
ಸಹಭವಾರ್ಕಜಪವನಜಾಂಗದಮುಖ್ಯರನು ಕರೆದು ।
ಬಹಳಗಂಭೀರಾಂಬುಧಿಯ ದಳ
ಸಹಿತ ದಾಂಟುವೆವೆಂತು ಕಾರ್ಯದ
ವಿಹಿತಯುಕ್ತಿಯ ಮಥಿಸಿ ನಿರ್ಧರವಾಗಿ ಪೇಳೆಂದ ॥ ೧

ವೀರಕಪಿಭಟರೆದ್ದು ಮಿಗೆ ಜೋ
ಹಾರುಗೈದಂಬುಧಿಯ ಲಂಘಿಸಿ
ಸೂರೆವಿಡಿದಾಲಂಕೆಸಹ ದನುಜಾಧಿಪನ ತುಳಿದು ।
ತೋರುವೆವು ಸೋಸಿದೊಡೆ ಬ್ರಹ್ಮಪು
ರಾರಿಗಳ ಮರೆವೊಕ್ಕೊಡೆಯು ಸಂ
ಹಾರಗೈದಪೆವೆನುತ ಕೇಳ್ದರು ನೃಪನ ನೇಮವನು ॥ ೨

ಜೀಯ ಕೇಳ್ ಜನಪಾಲಕಾರ್ಯದ
ನ್ಯಾಯ ಪರರಂ ಗೆಲಲು ಚತುರೋ
ಪಾಯಮುಂಟತಿಸಾಮಭೇದೋದ್ದಾನದಂಡಗಳು ।
ತೋಯಧಿಯನೊಡಬಡಿಸಿ ಮಾರ್ಗವ
ಹಾಯಗೈಸುವ ಮಿಾರಿದೊಡೆ ಶಿಖಿ
ಸಾಯಕದೊಳೀಜಲವ ಶೋಷಿಪುದೆಂದನಸುರೇಂದ್ರ ॥ ೩

ಅನಿತರೊಳ್ ದಶಕಂಧರನ ಬೇ
ಹಿನ ಚರನು ಶಾರ್ದೂಲನೆಂಬವ
ವನಚರಾಕೃತಿಯಾಂತು ಕಪಿಸೈನಿಕವನೊಳಪೊಕ್ಕು ।
ಘನತೆಯೆಲ್ಲವ ಕಂಡು ತನ್ನ ಯ
ಮನದಿ ವಿಸ್ಮಿತನಾಗಿ ಮರಳ್ದಾ
ಮನುಕುಲೇಂದ್ರನ ಬಲವ ವಿವರಿಸಿ ಪೇಳ್ದನಧಿಪತಿಗೆ ॥ ೪

ಖಳಕುಲಾಗ್ರಣಿ ಕೇಳು ವಿಲಯದ
ಮಳೆಯ ತುಂತುರುವನಿಯ ಶರಧಿಯ
ಮಳಲನಭ್ರಾಂಗಣದ ತಾರಾಗಣದ ಸಂಖ್ಯೆಯನು ।
ತಳುವದೆಣಿಸಲ್ಬಹುದು ಕಪಿಸಂ
ಕುಳದ ಗಣನೆಯ ಕಾಣಲರಿದಿನ
ಕುಲವರೇಣ್ಯನ ಸಮರಕಿಂದಲೆ ಸಖ್ಯ ಲೇಸೆಂದ ॥ ೫

ಆದಶಾನನ ಬಳಿಕ ಶುಕನ ವಿ
ನೋದದಿಂ ಕರೆದುಸುರಿದನು ನೀ
ನಾದಿವಾಕರವಂಶಜನ ಸೈನಿಕವನೊಳಪೊಕ್ಕು ।
ಸೋದರನ ಸಂಸ್ಥಿತಿಯ ಸುಗ್ರೀ
ವಾದಿಗಳ ಸಾಮರ್ಥ್ಯದುರುಸಂ
ವಾದಗಳ ಲಕ್ಷ್ಮಣನ ಶೌರ್ಯವ ತಿಳಿದು ನೋಡೆಂದ ॥ ೬

ಆರು ಹಿತವರು ರಾಮನಿಗೆ ತಾ
ನಾರೊಡನೆ ಸಂಭಾಷಿಸುವ ಮ
ತ್ತಾರೊಡನೆ ರಣಮಂತ್ರದಾಲೋಚನೆಯ ಮಥಿಸುವನು ।
ಆರಮೇಲತಿಮೋಹ ಸಮುಖಿಗ
ಳಾರು ಪರಿಕಿಸಿ ಮೇಣು ರವಿಜನ
ತೀರರಿತು ಭೇದವನು ಪುಟ್ಟಿಸಿ ಬಹುದು ನೀನೆಂದ ॥ ೭

ಆಕ್ಷಣದಿ ಬೀಳ್ಕೊಂಡು ಶುಕನಾ
ರಾಕ್ಷಸೇಂದ್ರಂಗೆರಗಿ ಬಂದು ಪ
ರೀಕ್ಷಿಸುತ ರಘುವೀರಸೈನ್ಯವನಭ್ರಮಾರ್ಗದಲಿ ।
ಪಕ್ಷಗಳನೊಲೆಯಿಸುತ ಕಮಲವಿ
ಪಕ್ಷನಾತ್ಮಜನೊಡನೆ ತನ್ನವಿ
ಚಕ್ಷಣೆಯೊಳರುಹಿದನು ರಾವಣನುಸುರ್ದ ಕಾರಿಯವ ॥ ೮

ತರಣಿನಂದನ ಕೇಳು ದನುಜೇ
ಶ್ವರನ ಸಚಿವನು ತಾನು ನೀತಿಯ
ನರುಹುವೆನು ನಿಷ್ಕಾರಣದೊಳಗ್ರಜನ ಘಾತಿಸಿದ ।
ನರನ ನೇಹವ ನಚ್ಚಿ ಬೆಕ್ಕನೆ
ಬೆರತೆ ಪಗೆಯಿವನೆಂಬುದನು ನೀ
ನರಿಯೆ ದಶಕಂಧರನ ಸಾರ್ವುದು ಬುದ್ಧಿ ನಿನಗೆಂದ ॥ ೯

ಸರಸಿರುಹಸಂಭವನ ಮೆಚ್ಚಿಸಿ
ವರವ ಪಡೆದು ಮಹೇಶನದ್ರಿಯ
ಭರದಿ ನೆಗಪಿ ಮಹಾಯುಧವನಾರ್ಜಿಸಿ ದಿಶಾಧಿಪರ ।
ಧುರದಿ ಪಾರಿಸಿ ಪುಷ್ಪಕವ ಕೊಂ
ಡರಿಭಯಂಕರರಾಕ್ಷಸಾಧೀ
ಶ್ವರನ ಮೈತ್ರಿಯ ಬೆಳಸಿ ಬದುಕಲು ಬಹುದು ನೀನೆಂದ ॥ ೧೦

ಆಕಪಟವಚನವನು ಕೇಳ್ದು ವ
ನೌಕಸಾಧಿಪನಾಗ್ರಹಿಸಲಾ
ಲೋಕಿಸುತ ಮರಿಗೋಡಗಗಳುರಿದೆದ್ದು ಬೋಯೆನುತಾ ।
ಆಕಸಕೆ ನೆಗೆದಸುರನಂ ಪಿಡಿ
ದೌಂಕಿ ರೆಕ್ಕೆಯ ಮುರಿದು ತಂದಿ
ಕ್ಷ್ವಾಕುಕುಲಶೇಖರನ ಮುಂದಿಡೆ ನುಡಿದ ಕರುಣದಲಿ ॥ ೧೧

ದೂತನಂ ಮಂತ್ರಿಯನು ಪುಲ್ಗಡಿ
ದಾತನಂ ನೀರೆಲ್ವಕ್ಷವನ ಭೂ
ಜಾತವಲ್ಮಿಕವೇರಿದನನಾಯುಧವ ಬಿಸುಟವನ ।
ಘಾತಿಪುದು ಮತವಲ್ಲ ಕ್ಷಾತ್ರದ
ನೀತಿಯಿದು ಕಟಕವನು ತೋರಿಸಿ
ಯಿಾತನಂ ಕಳುಹೆಂದು ಬಿಡಿಸಿದನಾಗಲಾಶುಕನ ॥ ೧೨

ದನುಜನದರಿಂಮೇಲೆ ಸುಗ್ರೀ
ವನ ನಿರೀಕ್ಷಿಸಿ ರಾಕ್ಷಸಾಧೀ
ಶನಿಗೆ ಪ್ರತ್ಯುತ್ತರವ ಪೇಳುವೆನೇನನೆಂದೆನಲು ।
ಇನಕುಲಾಗ್ರಣಿ ಕೋಪದಲಿ ಪರ
ವನಿತೆಗಳುಪಿದ ವಾಲಿಯನು ಕೊಂ
ದನು ನಿಶಾಚರಪತಿಗೆ ಬಹುದಾಬಾಧೆ ಪೇಳೆಂದ ॥ ೧೩

ಧುರಮಹೀಕುಂಡದಲಿ ಕೋಪ
ಸ್ಫುರಿತದಗ್ನಿಗೆ ದನುಜರೋಹಿತ
ಸುರಿವಘೃತ ನರದರ್ಭೆ ಶಲ್ಯದಸಮಿಧೆಗಳ ಘಟಿಸಿ ।
ದುರುಳರಾವಣಕುಂಭಕರ್ಣರ
ಶಿರಗಳಾಹುತಿಯಿತ್ತು ಯಾಗವ
ವಿರಚಿಸದೆ ಬಿಡ ರಾಘವಾಧ್ವರಿಯೆನುತ ಪೇಳೆಂದ ॥ ೧೪

ಅತ್ತಲಾಶುಕನೈದಿದನು ಬಳಿ
ಕಿತ್ತು ಮುನ್ನ ವಿಭೀಷಣನು ನುಡಿ
ದುತ್ತರವ ನಿರ್ಧರಿಸಿ ಕಾರ್ಯವಿದುಚಿತವೆಂದೆನುತಾ ।
ಚಿತ್ತದಲಿ ಸಂಭ್ರಮಿಸಿ ರಘುವಂ
ಶೋತ್ತಮನು ಶುಭಲಗ್ನದಲಿ ತಾಂ
ಚಿತ್ತರದ ತಪಸ್ಗೈಯಲುದ್ಯೋಗಿಸಿದನಾತ್ಮದಲಿ ॥ ೧೫

ಕಪಿಕಟಕ ಕಲಶಾಬ್ಧಿ ಹಾಸಿನ
ವಿಪುಲದರ್ಭೆಯಶಯ್ಯೆ ಫಣಿಪತಿ
ನೃಪಶಿರೋಮಣಿ ರಾಮನಾದಿಮವಿಷ್ಣುವೆಂದೆನಿಸಿ ।
ಗುಪಿತದಿಂ ಧ್ಯಾನಿಸುತಲಾವಾ
ರ್ಧಿಪನ ನಿಜಯೋಗದಲಿ ಭೀಕರ
ತಪವ ರಚಿಸಿದ ವಾಸರತ್ರಯ ನಿರಶನವ್ರತದಿ ॥ ೧೬

ಜಲಧಿಪತಿ ಮೈದೋರದಿರೆ ಕಂ
ಡಳಲಿ ರೌದ್ರಾವೇಶದಲಿ ಪಿರೆ
ಗಳೆದ ಕಾಳಭುಜಂಗನೊಲು ಹುಂಕರಿಸುತುರಿದೆದ್ದು ।
ಎಲೆಸುಮಿತ್ರಾಸೂನು ನಮ್ಮನು
ಹುಲುಮನುಜರೆಂದೆಣಿಸಿ ಗರ್ವದಿ
ಮಲೆತಿಹನು ದರ್ಪವನು ಬಿಡಿಸುವೆ ಧನುವ ತಾರೆಂದ ॥ ೧೭

ಚಂಡವಿಕ್ರಮರಾಘವನು ಬಿ
ಲ್ಗೊಂಡು ಜೇವೊಡೆದಾರ್ಭಟಿಸಿ ಶಿಖಿ
ಕಾಂಡವನು ಸಂಧಿಸಲು ಕಮಲಭವಾಂಡ ತಲ್ಲಣಿಸೆ ।
ದಿಂಡುರುಳೆ ತಾರೆಗಳು ರವಿಶಶಿ
ಮಂಡಲಗಳುರಿಮಸಗೆ ದಿಗ್ವೇ
ತಂಡಗಳು ನಡುಗಿದುವು ಧರೆ ಕಂಪಿಸಿತು ಭೀತಿಯಲಿ ॥ ೧೮

ನಿಗಮವೇದ್ಯನು ರೌದ್ರದೊಡನಾ
ಶುಗವ ಕಳುಹಲು ತನ್ಮುಖಾಗ್ರದಿ
ಭುಗಿಭುಗಿಲುಭುಗಿಲೆಂದು ಕಬ್ಬೊಗೆ ಮಸಗೆ ರವಳಿಯಲಿ ।
ಧಗಧಗನೆ ಧಳ್ಳುರಿಯು ಹೊರಳಿಯು
ಲುಗುಳ್ವ ತನಿಗೆಂಡಗಳ ಕಿಡಿಕಿಡಿ
ಯೆಗರಿಸುತಲಂಬುಧಿಯನುಗಿದರಸಿದುದು ನಾಲ್ದೆಸೆಯಾ ॥ ೧೯

ಅಡಿಯಲಿಹ ಬಡಬಾಗ್ನಿ ಮಧ್ಯದಿ
ತುಡುಕುತಿಹ ಬಾಣಾಗ್ನಿ ಮೇಲ್ಗವಿ
ದಡರುತಿಹ ರಘುವರನ ಘನಕೋಪಾಗ್ನಿಯೊಂದಾಗಿ ।
ಹೊಡೆಮಗುಚಿ ತಳವಳಿಸಿ ಭಂಗವ
ಪಡಿಸಿ ಸೀತ್ಕಾರದಲಿ ಕಡಲಂ
ಕುದಿಯುತಿರ್ದುದು ಭೂನಭೋಂತರದುರಿಯ ಲಹರಿಯಲಿ ॥ ೨೦

ಶರನಿಧಿಯೊಳಡಗಿರ್ದ ಶಂಬರ
ಕರಿಮಕರಕರ್ಕಟಕಕಚ್ಛಪ
ನರಭುಜಂಗಮಭುವನಹಿತಮೊದಲಾದ ಜೀವಿಗಳು ।
ಕರಿಗಳಾದವು ರತುನಗಳು ಸೀ
ಕರಿಗಳಾದವು ಶೈಲಘಟೆ ಭ
ಕ್ಕರಿಗಳಾದವು ಪೇಳಲಸದಳವಾಮಹಾದ್ಭುತವ ॥ ೨೧

ಜಡಧಿಯಾದುದರಿಂದ ಸಾಗರ
ದೊಡೆಯ ಮೈದೋರದಿರೆ ರಘುಪತಿ
ತುಡುಕಿದನು ಬ್ರಹ್ಮಾಸ್ತ್ರವನು ಮೂಲೋಕ ತಲ್ಲಣಿಸೆ ।
ಕಡಲು ಶೋಷಿಸಿ ಭಯದೊಳಂಬಿನ
ಕಡೆಗೆ ಬಂದುದು ಮುತ್ತಿನೊಲು ಮೇಣ್
ಮಡದಿಯರು ಮೊರೆಯಿಡಲು ಬಂದನನಂತಭೀತಿಯಲಿ ॥ ೨೨

ಚಂಡಬಲಚಂಡೀಶಮಣಿಕೋ
ದಂಡಖಂಡನಪಂಡಿತನ ತಾಂ
ಕಂಡು ಶರಣಾಗತನ ಮನ್ನಿಸಿ ಕಾಯಬೇಕೆನುತಾ ।
ಮಂಡೆಯನು ಮಣಿದೆರಗಿ ರತುನದ
ದಂಡೆಯಂ ಮುಂದಿಟ್ಟು ಭಯರಸ
ವಂಡಲೆಯೆ ಭಕ್ತಿಯಲಿ ಸಂಸ್ತುತಿಗೈದನಬುಧೀಂದ್ರ ॥ ೨೩

ಶರಣು ತರಣಿಪ್ರತಿಮ ದೀನೋ
ದ್ಧರಣ ಶರಣು ಜಗದ್ಧಿತಾಂತಃ
ಕರಣ ಶರಣು ವಿರಂಚಿಮುಖ್ಯಾಮರಕುಲಾಧೀಶ ।
ಶರಣು ತನ್ನಪರಾಧಶತವನು
ಮರೆತು ಕರುಣಾದೃಷ್ಟಿಯಲಿ ಪತಿ
ಕರಿಸು ನಿನ್ನಯ ಕೋಪಶಿಖಿಗಾಂತಪೆನೆ ತಾನೆಂದ ॥ ೨೪

ಪಾದಗಳಗಭಿನಮಿಸಿ ಮಿಗೆ ಗಂ
ಗಾದಿನದಿಗಳು ಪೊಗಳ ಕೃಪೆಯಿಂ
ದಾದರಿಸಿ ಮಾಂಗಲ್ಯಸೂತ್ರವನೀಯಬೇಕೆನಲು ।
ಮೇದಿನೀಪತಿ ಶಾಂತಿವಡೆದು ಮ
ಹೋದಧೀಶನ ಕಾಯ್ದು ಮತ್ತನ
ಕೋದರಾಶುಗಕಾಹುತಿಯ ತೋರೆಂದು ಬೆಸಗೊಂಡ ॥ ೨೫

ದೇವ ಮರುದೇಶದಲಿ ತನ್ನಯ
ಜೀವನಕೆ ಶತ್ರುಗಳು ಕೋಟಿವಿ
ಭಾವರೀಚರರಿಹರು ಬೇಗ ಪ್ರಯೋಗಿಸೆಂದೆನಲು ।
ಆವಕೋಂತರದಲ್ಲಿ ಕಳುಹಲು
ಪಾವಕಾಕೃತಿಯಿಂದ ಶರವೂ
ಠಾವಿಗೈದಿ ನಿಶಾಚರರ ದಹಿಸಿದುದು ನಿಮಿಷದಲಿ ॥ ೨೬

ಅರಸನಾಬಳಿಕಂಬುಧೀಶನ
ಕರೆದು ಲಂಕಾಪುರದ ಮಾರ್ಗಕೆ
ತೆರಪುಗೊಡಬೇಕೆನಲು ಸನುಮತವಾಗಿ ಕೈಮುಗಿದೂ ।
ಪರಮಪುರುಷನು ನೀನು ರಾವಣ
ಹರಣ ನಿನ್ನಿಂದಾಹಬಲ್ಲೆನು
ಪರುಠವಿಸಿ ಸೇತುವನು ಸೈನ್ಯವ ನಡಿಸಬಹುದೆಂದ ॥ ೨೭

ಆನುಡಿಗೆ ನೃಪ ಸನುಮತಿಸಿ ರವಿ
ಸೂನುವಂ ಮೊಗನೋಡಲಚ್ಚರಿ
ಯೇನು ನಿಮಿಷದಿ ಬಂಧಿಸುವೆನಾಜ್ಞಾಪಿಸೆಂದೆನಲು ।
ಮಾನಸದಿ ಸಂಭ್ರಮಿಸುತಾಗ ಗ
ಜಾನನಾರ್ಚನೆಗೈದು ಬಹುಸ
ನ್ಮಾನದಿಂ ಕಪಿಯೂಥಪತಿಗಳಿಗಿತ್ತನಪ್ಪಣೆಯಾ ॥ ೨೮

ತರಣಿನಂದನ ಬಳಿಕ ರಾಮನ
ಚರಣಗಳಿಗಭಿನಮಿಸಿ ಕಾನನ
ಚರರ ಪಡೆ ಬೊಬ್ಬಿಡಲು ನಡೆದರೆಯೋಜನದ ಗಿರಿಯು ।
ಕರದೊಳಾಂತೈತಂದು ರಘುಕುಲ
ವರಘ ವಿಜಯಸ್ತಂಭವೆನಲಾ
ಶರನಿಧಿಯ ತೀರದಲಿ ನಿಲಿಸಿದನತುಲಿತೋತ್ಸವದಿ ॥ ೨೯

ಅಮರರಂಬರವೀಥಿಯಲಿ ಸಂ
ಭ್ರಮಿಸಿ ಕುಸುಮದ ಸೋನೆಗರೆಯುತ
ಧಮಧಮತ್ಕಾರಂಗಳಿಂ ದುಂದುಭಿಯ ಮೊಳಗಿಸಲು ।
ತಮತಮಗೆ ಕಪಿಸೇನೆ ನಡೆತಂ
ದಮಿತಗಿರಿತರುಕೋಟಿಗಳನಾ
ಕಮಲನಿಧಿಯೊಳಗಡಕುತಿರ್ದರುದಗ್ರಸಾಹಸದಿ ॥ ೩೦

ಎನಿತುತರುಶೈಲಗಳ ಹಾಯ್ಕಲು
ವನಧಿಯೊಳ್ ಮುಳುಗುತಿರೆ ರಘುನಂ
ದನನು ಕಂಡಾಗ್ರಹಿಸಲಂಬುಧಿರಾಜನೈತಂದು ।
ಇನಕುಲೋದ್ಭವ ನೋಡು ತನ್ನೊಳ
ಗನುದಿನವು ಸಂಚರಿಪ ಮೀನುಗ
ಳನಿತು ಗಿರಿಗಳ ನುಂಗುವವು ಚಿತ್ರವನು ಕೇಳೆಂದಾ ॥ ೩೧

ಕಂಗೊಳಲು ಶತಯೋಜನಾಯತ
ದಂಗವಿಡಿದಿಹುದೊಂದು ತಿಮಿಯದ
ನುಂಗುತಿರ್ಪ ತಿಮಿಂಗಿಲನ ನುಂಗುವದು ತದ್ಗಳನು ।
ವಿಂಗಡಿಸದೊಂದೊಂದನೀಪರಿ
ನುಂಗುತಿರ್ಪವು ಮತ್ಸ್ಯಗಳು ರಘು
ಪುಂಗವನೆ ನಳನಿಂದ ಸೇತುವ ರಚಿಸಬಹುದೆಂದ ॥ ೩೦

ಆವಚನಕನುಮತಿಸಿ ರಘುವಂ
ಶಾವತಂಸನು ಪ್ರಬಲಬಲಸು
ಗ್ರೀವಮುಖ್ಯವನೌಕಸಾಧಿಪರಿರಲು ದುರ್ಘಟದ ।
ಈವನಧಿಗಾನಳನು ಸೇತುವ
ನಾವಬಗೆಯಿಂ ರಚಿಪನೆನಲು ವ
ಚೋವಿನಯದಿಂದುಸುರ್ದನಂಬುಧಿರಾಜನುತ್ತರವ ॥ ೩೧

ಮಿತ್ರಕುಲ ಕೇಳ್ ವಿಶ್ವಕರ್ಮನ
ಪುತ್ರನಾನಳ ಬಾಲ್ಯದಲಿ ನಿಜ
ಮಿತ್ರರೊಡಗೊಂಡಖಿಳತಾಪಸರುಗಳ ಚೇಷ್ಟಿಸುತಾ ।
ಧಾತ್ರಿಯೊಳ್ ಕ್ರತುಸಾಧನಗಳ ಪ
ವಿತ್ರಹೋಮಾಗ್ನಿಗಳ ಕೆಡಿಸುತ
ಚಿತ್ರಸಾಲಗ್ರಾಮಗಳ ಬಿಸುಡುವನು ವಾರ್ಧಿಯಲಿ ॥ ೩೨

ಮೌನಿಗಳು ಚಿಂತಿಸುತ ಪಂಕಜ
ಸೂನುವಿಗೆ ಮೊರೆಯಿಡಲು ಕೇಳ್ದಸ
ಮಾನಸಂಪ್ರೀತಿಯಲಿ ಸಂತಸಗೊಳಿಸುತವರುಗಳ ।
ಆನಳನು ಕೈಯಿಂದ ಶರಧಿಯೊ
ಳೀನ ಬಿಸುಡಲಿ ಮುಳುಗದಿರಲೆಂ
ದಾನಿಮಿಷದಲಿ ನೇಮವಿತ್ತನಿಬರನು ಕಳುಹಿಸಿದ ॥ ೩೩

ಅದರ ಬಗೆಯಿಂ ನಳನು ಕೈವಮು
ಟ್ಟಿದೊಡೆ ಗಿರಿತರುಗಳು ಮುಳುಂಗದೆ
ಯುದಧಿಬಂಧನ ಸಾಧ್ಯವಹುದೆಂದೆನಲು ಸಂಭ್ರಮಿಸಿ ।
ಪದುಮಹಿತಕುಲನರ್ಕತನಯಂ
ಗದರ ಸಾರೆಗೆ ಕರೆದು ಕಡುನೇ
ಹದಲಿ ನಳನಿಂ ಸೇತುಬಂಧವ ರಚಿಸು ಬೇಗೆಂದ ॥ ೩೬

ತರಣಿನಂದನ ಬಳಿಕ ನಳನಂ
ಕರೆದು ಮಿಗಿಲುಪಚರಿಸಿ ಸೇತುವ
ವಿರಚಿಸೆಂದಪ್ಪಣೆಯನಿತ್ತು ವನೌಕಸಾಧಿಪರ ।
ಗಿರಿಗಳಂ ತರಹೇಳಿ ಮೇಲೆ
ಚ್ಚರಿಕೆಗೆಲ್ಲ ವಿಭೀಷಣನ ನಿಂ
ದಿರಿಸಿ ಬಡಿಯಮೊಳಗಗೆ ಕಪಿವ್ರಾತಗಳನೆಬ್ಬಿಸಿದ ॥ ೩೭

ಚಂಡಕರಸುತನಾಜ್ಞೆಯಲಿ ಮುಂ
ಕೊಂಡು ರಘುಪತಿಗೆರಗಿ ನಿಜಭುಜ
ದಂಡಗಳನಪ್ಪಳಿಸಿ ಭೋಯೆಂದಾರ್ದು ದೆಸೆದೆಸೆಗೆ ।
ತಂಡತಂಡದಿ ನಡೆದು ದಿಗ್ವೇ
ತಂಡಗಳು ತಲ್ಲಣಿಸೆ ಕಮಲಭ
ವಾಂಡ ಕಂಪಿಸಲದ್ರಿಗಳ ಕಿತ್ತೆತ್ತಿದರು ನಭಕೆ ॥ ೩೮

ಶಿರದೊಳಾಂತರು ಕೆಲರು ಕಕ್ಷದೊ
ಳಿರುಕಿ ತಂದರು ಕೆಲರು ಪದದಿಂ
ದುರುಳಿಸುತ್ತಲೆ ಕೆಲರು ಬಾಲದಿ ಬಿಗಿದು ಕೆಲಕೆಲರು ।
ಕರದಿ ಚಿಮ್ಮುತ ಕೆಲರು ಹೆಗಲಿನ
ಹೊರೆಗೆ ಸೇರಿಸಿ ಕೆಲರು ಬೆನ್ನೊಳು
ಧರಿಸಿ ಕೆಲರೈತಂದು ನಿಂದಡುಕಿದರು ಸೇತುವಿಗೆ ॥ ೩೯

ನೆಗೆನೆಗೆದು ಕುಪ್ಪಳಿಸಿ ಕುಬುಃಬಿರಿ
ದಗಡುಗಪಿಗಳು ನೀನು ತಾನೆಂ
ದೊಗುಮಿಗೆಯು ಹೋಣಿಕೆಯಲಿ ಕಿತ್ತವರವಿತಶೈಲಗಳ ।
ನೆಗಹಿ ಗಗನಕೆ ಬೀಳ್ವ ಗಿರಿಗಳ
ತೆಗೆದು ಹಸ್ತದೊಳಣ್ಣೆಕಲ್ಲಾ
ಟಗಳನಾಡುತ ತಂದುಕೊಟ್ಟರು ವಾಯುವೇಗದಲಿ ॥ ೪೦

ಕಿತ್ತ ಗಿರಿಗಳ ಕೀಳ್ವ ಗಿರಿಗಳ
ಹೊತ್ತ ಗಿರಿಗಳ ಹೊರುವ ಗಿರಿಗಳ
ತತ್ತರದ ತಾಕಿನಲಿಯೊಡೆದೊಡೆದುರುಳ್ವ ಶಿಖರಗಳ ।
ಎತ್ತಿ ಬಾಹರನಿದಿರುಪ್ಪೋಪರ
ಮೊತ್ತಗಳ ಸಂದಣಿಯಲಿಳೆಯು
ಳೆಳ್ಳುತ್ತಲಿಕೆ ತೆರಪಿಲ್ಲವೆನೆ ತಂದಿತ್ತರದ್ರಿಗಳ ॥ ೪೧

ಧರಣಿವಧು ಸಂತಸದಿ ನಟಿಸುತ
ಕರದಿ ಮಣಿಕಂತುಕಗಳಾಡಿದ
ಪರಿಯೊ ಜಂಝೂಪವನನಟ್ಟುಳಿಗುರುಳ್ವ ಮೇಘಗಳೊ ।
ಆರರೆ ಬಣ್ಣಿಪೆನೇನನಾವನ
ಚರರ ಭುಜಶಕ್ತಿಯಲಿ ಗಿರಿಗಳ
ನೆರಪಿ ಸಾಲ್ಗೊಂಡಿಟ್ಟಣಿಸಿ ಬರುತಿರ್ದವಂಬುಧಿಗೆ ॥ ೪೨

ಒಡನೊಡನೆ ವನಚರರು ಹಸ್ತಕೆ
ಕೊಡುವ ಗಿರಿಗಳನಾಂತು ನಳನಾ
ಕಡಲ ಸೇತುವನೊಟ್ಟೆ ದಶಯೋಜನವಿಶಾಲದಲಿ ।
ನಡಸಿದನು ನಾನಾವಿಚಿತ್ರದ
ಕಡುಹಿನಲಿ ಕಪಿವೀರರುಲಿದು
ಗ್ಘಡಿಸಲೊಂದೇದಿನ ಚತುರ್ದಶಯೋಜನಾಯತವ ॥ ೪೩

ಮರುದಿವಸದುದಯದಲಿ ರಾಮನ
ಚರಣಗಳಿಗಭಿನಮಿಸಿ ಮೇಣಾ
ತರಣಿನಂದನಮುಖ್ಯಸಕಲಕಪೀಂದ್ರರುತ್ಸವದಿ ।
ತೆರಳಿ ನಿಜಬಲದೊಡನೆ ದೆಸೆದೆಸೆ
ಗೆರಗಿದರು ದಿಗುಪಾಲರೆದೆ ಜ
ರ್ಝರಿತವಾಗಲಜಾಂಡಘಟ ಕಂಪಿಸಲು ಭೀತಿಯಲಿ ॥ ೪೪

ರವಿಜ ವಿಂಧ್ಯಾಚಲವನನಿಲೋ
ದ್ಭವನು ಕ್ರೌಂಚಾಗವನು ತಾರಾ
ಭವನು ದುರ್ಧರಗಿರಿಯನಗ್ನಿಜ ಮಲಯಭೂಧರವ ।
ಗವಯ ಗೋವರ್ಧನವನಾಜಾಂ
ಬವನು ಧವಳಾದ್ರಿಯ ಭಿಷಕ್ಸಂ
ಭವ ಶತಶೃಂಗಕ್ಷಮಾಭೃದ್ವರವ ತಂದಿತ್ತ ॥ ೪೫

ಪನಸನತುಳಸುದರ್ಶನಾದ್ರಿಯ
ವಿನುತಋಷಭನು ಪಾರಿಯಾತ್ರವ
ಘನಬಲಾಢ್ಯಗವಾಕ್ಷನಂಜನಗೋತ್ರರಾಜವನು ।
ಅನಘಮೈಂದದ್ವಿವಿದಶರಭರು
ಮನಸಿನುತ್ಸಾಹದಿ ಮಹೇಂದ್ರಾ
ವನಿಧರಕೆ ಕೈಯಿಟ್ಟು ಶಿರೋಯೆಂದಾರ್ದರದುಭುತದಿ ॥ ೪೬

ಭರದೊಳಾಗಿರಿಪತಿಗಳಿದಿರ್ವಂ
ದೆರಗಿ ಪಕ್ವಫಲಾವಳಿಯ ಮುಂ
ದಿರಿಸಿಯಪರಾಧಿಗಳು ತಾವಲ್ಲಕಟ ರಾಘವನ ।
ಚರಣಸೇವೆಗೆ ನಮ್ಮ ಶಿಖರೋ
ತ್ಕರಗಳನು ಕೈಕೊಂಡು ಮನ್ನಿಸಿ
ಕರುಣದಿಂದಾಳುಹೆಂದರಾಕಪಿಸಾರ್ವಭೌಮರಿಗೆ ॥ ೪೭

ಅವರ ಬಿನ್ನಹಗೇಳಿ ಕಪಿಪ್ರಂ
ಗವರು ತದ್ಗಿರಿಶಿಖರಗಳ ಮುರಿ
ದವಘಡಿಸುತುರೆ ಪರ್ವತಂಗಳ ಕಿತ್ತು ಬೊಬ್ಬಿಡುತ ।
ಅವಯವಂಗಳೊಳಾಂತು ಮಾರುತ
ಜವದೊಳೈತಂದವಿತಕಪಿಗಳು
ತವಕದಿಂ ಕೊಡಲಾಗ ನಳ ರಚಿಸಿದನು ಸೇತುವನು ॥ ೪೮

ಕಟ್ಟುವಡೆಯದೆ ಜಲದೊಳಾಬಲು
ಬೆಟ್ಟಗಳು ಕೆಲಕೊಲೆಯೆ ನಳ ಕಂ
ಗೆಟ್ಟು ತನ್ನಯ ಸರ್ವಶಕ್ತಿಯೊಳೆಲ್ಲಸಾಹಸವ ।
ಪಟ್ಟು ತೀರದೆ ನಿಜಮನೋರಥ
ಕೆಟ್ಟಿತೆಂದೆನುತಳುಕಿ ರಘುಕುಲ
ಪಟ್ಟಭದ್ರಂಗೆರಗಿ ಬಿನ್ನಹಗೈದನಾಹದನ ॥ ೪೯

ಭೂರಮಣನಾವಿಶ್ವಕರ್ಮಕು
ಮಾರಗುಸುರ್ದನು ಸಕಲವಾನರ
ವೀರರಿತ್ತದ್ರಿಗಳನೆಡಗೈಯಿಂದ ತೆಗೆತೆಗೆದು ।
ವಾರಿಧಿಯ ಬಂಧಿಸುವ ದುರಹಂ
ಕಾರದಿಂದವರುಗಳ ಮನಕೆ ವಿ
ಚಾರ ಪುಟ್ಟಿದುದಧಿಕಬಲ ನಿನಗಿಲ್ಲವಾಯ್ತೆಂದ ॥ ೫೦

ಮುಂದೆ ಯುಕುತಿಯ ಕೇಳು ಕಪಿಗಳು
ತಂದುಕೊಡಲದ್ರಿಗಳ ಕರಯುಗ
ದಿಂದಲಾಂತತಿಶಯದಿ ರಾಮಾಎಂಬ ವರ್ಣಗಳ ।
ಒಂದಕೊಂದಂ ಬರೆದು ಪೊಂದಿಸ
ಲಂದವಡುವದು ಸೇತು ನಿನಗದ
ರಿಂದಲಹುದತಿಕೀರ್ತಿಯೆನುತಾಜ್ಞಾಪಿಸಿದ ರಾಮ ॥ ೫೧

ನಳನು ರಾಘವ ಪೇಳ್ದ ಯುಕುತಿಯ
ನಳವಡಿಸಿ ಕಪಿವೀರರಿತ್ತ
ಗ್ಗಳದ ಗಿರಿಗಳನಾಂತು ಸೇತುವ ರಚಿಸಲುಮ್ಮಳಿಸಿ ।
ಕಲಕಿ ಸಾಗರ ತುಳುಕಿ ಜಲ ದುಂ
ಧುಳಂಧುಳಂಮುಡುಡುಂಮೆನಿಪ ಹೆ
ಕ್ಕಳದ ಘೋಷಗಳೆಸಗಿ ಘುಮ್ಮಿಡಿದವು ನಭೋಂತರವ ॥ ೫೦

ಕಡಲ ಕಂಕಣಗಣಗಳದ್ರಿಗ
ಳಡುಕಿನಿಂದುಬ್ಬೆದ್ದು ಗಗನವ
ತುಡುಕಿ ನಿರ್ಜರವಾಹಿನಿಯ ಸಂಗವಕೆ ಮನವೆಳಸಿ ।
ಒಡವೆರೆದು ದಿನಮಣಿಯ ತೇಜವ
ಕೆಡಿಸಿ ಹಿಮಕರನೆನಿಸಿ ವಹ್ನಿಯ
ತಡೆದು ಬೂರಟೆಗೊಳಿಸಿದವು ಬ್ರಹ್ಮಾಂಡಕರ್ಪರವಾ ॥ ೫೬

ವಾರಿನಿಧಿಯೊಳು ಸೇತುವಿಪ್ಪ
ತ್ತಾರುಯೋಜನ ನಡೆದುದಾದಿನ
ವೀರಕಪಿಬಲರಲಸಿ ನಡೆದರು ಸಕಲವನಗಳಿಗೆ ।
ಭೋರನಮೃತದ ಸೋನೆಸುರಿದ ಬ
ಲಾರಿ ತಂಬೆಲರೊರೆದುದಾಕಾಂ
ತಾರದೇವತೆಯೊದಗಿಸಿತ್ತಳು ಪಕ್ವಫಲಗಳನು ॥ ೫೪

ನಗಚರೋತ್ತಮರೆಲ್ಲರಾಪ
ಣ್ಣುಗಳ ಸವಿಸವಿದಮೃತಮಂ ಕುಡಿ
ದೊಗುಮಿಗೆಯ ಸಂಭ್ರಮದಿ ಕಳೆದಾನಿಶಿಯ ಮರುದಿವಸ ।
ನಿಗಮವೇದ್ಯನ ನೆನೆದು ಘನಶೈ
ಲಗಳ ತಂದೊದಗಿಸಲು ಸೇತುವ
ಬಿಗಿದ ನಳನತಿಸಾಹಸದೊಳೈವತ್ತುಯೋಜನವ ॥ ೫೫

ಮರುದಿವಸದುದಯದಲಿ ಬೊಬ್ಬಿರಿ
ದೆರಗಿ ಗಿರಿತರುಕೋಟಿಗಳ ವಾ
ನರಪತಾಕಿನಿ ತಂದು ಮುಂದಿಡಲಾಂತು ನೆಸುನಗುತಾ ।
ಕರಚಮತ್ಕಾರದಲಿ ಸೇತುವ
ವಿರಚಿಸಿದ ದಶಯೋಜನವ ನಳ
ನರರೆ ಸಾಹಸವೆಂತುಟೋ ಎಂದುಲಿಯಲಮರಗಣಾ ॥ ೫೬

ಸೇತುಶತಯೋಜನವ ರಚಿಸಿ ಮ
ಹಾತಿಶಯದಿಂ ಬಂದು ರಘುಕುಲ
ಜಾತನಡಿಗಳಿಗೆರಗೆ ಬಿಗಿಬಿಗಿದಪ್ಪಿ ಕರುಣದಲೀ ।
ಪೂತುರೇ ನಳ ಲೋಕದಲಿ ವಿ
ಖ್ಯಾತನಹುದಹುದೆನಲು ದಿವಿಜ
ವ್ರಾತ ಸುರಿದುದು ಪೂವಳೆಯ ದುಂದುಭಿಯ ಘೋಷದಲಿ ॥ ೫೭

ಹರಿಕಟಕಮಾನಂದದಲಿ ಬೊ
ಬ್ಬಿರಿಯಲಂಬುಧಿರಾಜನೈತಂ
ದೆರಗಿ ಸಂಸ್ತುತಿಗೈದು ರಘುಕುಲರಾಜಚಂದ್ರನಿಗೆ ।
ಪರಸಿ ಕೊಟ್ಟನು ವಜ್ರಕವಚವ
ವರಧನುರ್ಬಾಣಗಳ ಭೂಷಾಂ
ಬರಸುಗಂಧಾಲೇಪನಂಗಳನಧಿಕಭಕ್ತಿಯಲಿ ॥ ೫೮

ಪದುಮಹಿತಸುತಮುಖ್ಯರಾನಂ
ದದಲಿ ಬಿನ್ನಹಗೈಯೆ ಸುಮುಹೂ
ರ್ತದಲಿ ಹನುಮಂತನ ಮಹಾಸ್ಕಂಧದಲಿ ರಾಘವನು ।
ಪದುಳದಿಂದೆನಲಜನ ಭುಜಪೀ
ಠದಲಿ ಲಕ್ಷ್ಮಣದೇವರೈತಂ
ದದುಭುತದ ಸೇತುವ ನಿರೀಕ್ಷಿಸಿದರು ಪ್ರಮೋದದಲಿ ॥ ೫೯

ಭೂವನಿತೆ ನಿಜಪುತ್ರಿಗಭಯವ
ನೀವುದಕೆ ನೀಡಿರ್ದ ಬಾಹುವೊ
ರಾವಣಾದಿಮಹಾಸುರರ ನುಂಗುವೊಡೆ ಮೃತ್ಯುವಧು ।
ಶ್ರೀವಿ ಚಾಚಿದ ನಾಲಗೆಯೊ ಸ
ದ್ಭಾವದಿಂದಹಿರಾಜ ರಘುಕುಲ
ದೇವನಡಿಗೆಡೆದಂದವೋ ಎನೆ ಮೆರೆದುದಾಸೇತು ॥ ೬೦

ವಿಶದಮತಿ ಕೇಳ್ ಪುಷ್ಯಶುದ್ಧದ
ದಶಮಿಯಲಿ ಕಪಿಸೈನ್ಯದೊಡನಾ
ದಶರಥಾತ್ಮಜ ಸೇತುವಿಂಗಭಿನಮಿಸಿ ಮುಂಬರಿಯೆ ।
ದಶಮುಖನ ಸಹಜಾತನತಿಕ
ರ್ಕಶದ ಗದೆಯಂ ಝುಡಿಯುತಲಿ ಕೈ
ವಶದ ಮಂತ್ರಿಗಳೊಳು ಸುವೇಲಾಚಲದಿ ನೆಲಸಿರ್ದ ॥ ೬೧

ಹಿಂದೆ ರವಿಸುತಜಾಂಬವಂತರು
ಮುಂದೆ ವಾಲಿಜನಳಸುಷೇಣರು
ಹೊಂದಿ ಪಾರ್ಶ್ವಂಗಳಲಿ ಶತಬಲಿಗಂಧಮಾದನರು ।
ಚಂದದಿಂ ಕೈವಾರಿಸುತ ನಡೆ
ತಂದರರಸನ ಬಳಿಸಿನಲಿ ಕಪಿ
ವೃಂದ ನಡೆದುದು ನೆಲನು ಬೆಸಲಾದಂತೆ ನಾಲ್ದೆಸೆಯ ॥ ೬೨

ಗಗನಮಾರ್ಗದಿ ಕೆಲರು ಲಾಗಿನ
ಬಗೆಯ ತೋರುತ ಕೆಲರು ಶರಧಿಯ
ನುಗುಳಿ ಹಾಯುತ ಕೆಲರು ಲಂಘನೆಯಿಂದ ಕೆಲಕೆಲರು ।
ನೆಗೆದು ಕುಪ್ಪಳಿಸುತ್ತ ಕೆಲಕೋ
ಡಗಗಳತಿಚಿತ್ರಗಳ ತೋರುತ
ನಗತರುಗಳಂ ಝುಡಿಯುತ್ತೈದಿದರೆಲ್ಲದಿಕ್ಕಿನಲಿ ॥ ೬೩

ವೀರರಾಘವರಾಯ ಸೇತುವ
ಮೂರುದಿವಸಕೆ ದಾಂಟಿ ರಣಜಂ
ಝಾರಭಟರಾಟೋಪದಿಂದಿಳಿದನು ಸುವೇಲದಲಿ ।
ಆರುದಿನಕಪರಿಮಿತಕಪಿಬಲ
ವಾರಿನಿಧಿ ಬಂದೊದಗಿತೀಚೆಯು
ಮೂರುವಾಸರ ವಿಶ್ರಮಿಸಿ ಗುಡಿಹೊಯ್ದುದಗಲದಲಿ ॥ ೬೪

ರಾಜಶೇಖರವಿನುತ ನಿರ್ಜರ
ರಾಜರಾಜನ್ಮಕುಟಮಣಿವಿ
ಭ್ರಾಜಿತಾಂಘ್ರಿಸರೋಜನಹ ಸಹದೇವಪುರವರನು ।
ರಾಜಸದೊಳನಜಾದಿವೀರಸ
ಮಾಜದೊಳು ಕುಳ್ಳಿರ್ದ ನಿಖಿಳಸ
ಭಾಜನರ ಪರಿಕಿಸುತ ವಿಭವದೊಳತ್ತನೋಲಗವಾ ॥ ೬೫

---

# ಸುಮತಿ ಶತಕ.

॥ ಯಾಚಕ ಪದ್ಧತಿ ॥

ಬಾಯ್ದರೆ ಬಿಗಿದಿರೆ ಮೆಲ್ನುಡಿ
ಮೆಯ್ದಗೆಯಲ್ಮೂಕನಾಗಿ ಬಧಿರಾಂಧತೆಯಂ ।
ಮಾಯ್ದಧಿಕಾರವ್ಯಾಧಿಯಿ
ನೆಯ್ದಿದ ಬಾಳ್ವೆಣನನೆರೆಯಲಾಗದು ಸುಮತೀ ॥ ೧

ಕಳಿಯೇ ದಾತೃವಲಂ ಕೊಳು
ಗುಳದೊಳ್ತೂಳ್ವದೆ ಪರಾಕ್ರಮಂ ಕಬ್ಬಿಗರಂ ।
ಪಳಿಯದುದೆ ಜಾಣ್ಮೆ ಕಲಹ
ಕ್ಕೆಳಸುವುದೇ ಕೇಡು ನೋಡು ಧರೆಯೊಳ್ಸುಮತೀ ॥ ೨

ಧನರಹಿತನೆಂದು ಬಗೆದೀ
ವನನುಳವರೆ ಯಾಚಕರ್ಕ್ಕಳಿದು ನಿರ್ಧನವೆಂ ।
ದೆನುತೆ ಪಿಪೀಲಿಕೆಗಳ್ಕ
ರ್ಪ್ಪಿನ ಸಿಪ್ಪೆಯನುಳಿದು ಪೋಪುವೇನೆಲೆ ಸುಮತೀ ॥ ೩

ಧೀರಂಗೆ ಕೊಟ್ಟ ವಸ್ತುವ
ದೋರಂತಿರೆ ಪೆರ್ಚ್ಚಿದ ನಾಳಿಕೇರದ ಜಲದಂ ।
ತಾರಯ್ಯೆ ನಾಡೆ ಸುಖವಂ
ಬೀರುವುದೆಲ್ಲರ್ಗ್ಗಮೆಂದು ಭಾವಿಸು ಸುಮತೀ ॥ ೪

ತೃಣದಿಂದಮರಳೆ ಲಘುತರ
ಮೆಣಿಸಲ್ಕದರಿಂದೆ ನಾಡೆ ಲಘುವರ್ಥಿ ಸಮೀ ।
ರಣಿನಿವನನುಯ್ಯದಿರ್ಪಂ
ಪಣಮೆರೆವಂ ತನ್ನನೆಂಬ ಭಯದಿಂ ಸುಮತೀ ॥ ೫

ಪದಪಿಲ್ಲದಂಗೆ ವಿಬುಧಂ
ಮುದದಿಂ ಸತ್ಕವಿಯ ಕಾವ್ಯಮಂ ತಿಳಿಪಿದೊಡೇಂ ।
ನದು ಚಂದನಮಂ ನೀರಿ
ಲ್ಲದೆ ಶಿಲೆಯೊಳ್ತೇದ ಮಾಳ್ಕೆಯಪ್ಪುದು ಸುಮತೀ ॥ ೬

ಅರಸುಗಳೆಡೆಯೊಳ್ಬುಧಿಬಲ
ವಿರಹಿತನಾಗಿರ್ದ್ದ ಮನುಜನಲೆದೊಡಮೇಂ ಪಂ ।
ಜರದೆಡೆಯೊಳ್ಮಾರ್ಜಾರಂ
ತಿರುಗಿದೊಡೇಂ ಗಿಳಿಯುದರ್ಕ್ಕೆ ದೊರೆವುದೆ ಸುಮತೀ ॥ ೭

॥ ಪುತ್ರ ಪದ್ಧತಿ ॥

ಖಲನೆನಿಸಿದ ಮಗನಿರ್ದ್ದಂ
ಫಲಮೇಂ ತಂದೆಯ ಗುಣಂಗಳಂ ಕಿಡಿಪಂ ಕೈ ।
ಪೊಲದಿನಿಗರ್ಪೊಳಪ್ಸಲಗಿ
ತಲೆದೋರಲ್ಕದರ ಸೋದು ನಿಲ್ವುದೆ ಸುಮತೀ ॥ ೮

ಪಸಿದುಣ್ಬನ್ನಮೆ ಸುಧೆ ಮ
ನ್ನಿಸಿ ನಲವಿಂದರ್ಥಿಗಳ್ಗೆ ಕುಡುವನೆ ದಾತಂ ।
ವ್ಯಸನಂಸೈರಿಸುವನೆ ಮಾ
ನಿಸನರಿವುಳ್ಳವನೆ ವಂಶತಿಲಕಂ ಸುಮತೀ । ೯

ಮಗನುದಿಸಿದ ದಿನದೊಳ್ತಂ
ದೆಗೆ ಸಂತಸಮೇನೊ ಪಿರಿಯರೊಲ್ದಾಮಗನಂ ।
ಪೊಗಳಲ್ಕಾದಿನದೊಳೆ ತಂ
ದೆಗೆ ಮಗನುದಿಸಿದ ಮಹೋತ್ಸವಂ ಗಡ ಸುಮತೀ ॥ ೧೦

॥ ಮಿತ್ರ ಪದ್ಧತಿ ॥

ಕೆಳೆತನಮಿರ್ದ್ದೊಡೆ ದೋಷಂ
ಗಳಗೋಚರಮೆನಿಸಿದಪ್ಪುವಾರ್ಗ್ಗಂ ಜಗದೊಳ್ ।

ಕೆಳೆತನಮಳಿಯಲ್ಸುಗುಣಂ
ಗಳೆ ಬಹುದೋಷಂಗಳಾಗಿ ತೋರ್ಕುಂ ಸುಮತೀ ॥ ೧೧

ವನಜಂ ಜಲಮನಗಲ್ದಿರೆ
ದಿನಪನದಂ ಬಿಸಿಲ ಬೇಗೆಯಿಂ ಬಾಡಿಪವೋಲ್ ।
ಸ್ವನಿವಾಸಬಲಮನುಳಿದನ
ನಿನಿಯನೆ ಪಗೆಯಾಗಿ ಬಾಧಿಪಂ ಗಡ ಸುಮತೀ ॥ ೧೨

## ॥ ವ್ಯರ್ಥವಾದ ವಸ್ತುಗಳು ॥

ಇನಿದೆನಲೋದದ ಬಾಯ್ತ
ನ್ನನುಜಾತರ ಕರೆಯದಿರ್ದ್ದ ಬಾಯ್ಗನಿಸೀ ಓ ।
ದನವಿಕ್ಕೆನ್ನದ ಬಾಯ್ಕ್ಮೀ
ದಿನಿಯೊಳ್ಕಂಬರನಗುಳ್ದ ಗುಳಬಾಯ್ಸುಮತೀ ॥ ೧೩

ತಂಬುಲವಿಲ್ಲದ ಬಾಯುಂ
ಬಿಂಬಾಧರೆಯಿಲ್ಲವಿರ್ದ್ದ ಮನುಜನ ಮನೆಯುಂ ।
ಅಂಬುಜಮಿಲ್ಲದ ಕೊಳನುಂ
ತುಂಬಿದ ಪೆರೆಯಿಲ್ಲದಿರುಳುಮೊಸೆವುದೆ ಸುಮತೀ ॥ ೧೪

ಲೀಲೆ ಮಿಗೆ ಪಾಡದನ ಬಾ
ಯ್ಶ್ರೀಲೋಲನನೊಲ್ದು ನುತಿಸದಿರ್ದನೆ ಬಾಯು ।
ಶ್ಲೀಲಮನೊರೆವಾತನ ಬಾ
ಯ್ಕ್ಮೀಲನಿಪುದೆ ನೋಡೆ ದರಿಯ ಬಾಯೊಲೆ ಸುಮತೀ ॥ ೧೫

ಪುರುಷಾರ್ಥವಿಲ್ಲದೋದುಂ
ಸರಸಂ ತಾನೆನಿಸದಿರ್ದ್ದ ಗೀತಂ ವಿದ್ವ ।
ದ್ವರರಿಲ್ಲದ ಸಭೆ ಸಭ್ಯ
ಸ್ವರವೊಲೆಯದ ಮಾತು ಮೆರೆಯವೆಂದುಂ ಸುಮತೀ ॥ ೧೬

॥ ಗ ಣ ಕ ಪ ದ್ಧ ತಿ ॥

ಕರಣಿಕನೊರ್ವ್ವಂ ಗ್ರಾಮ
ಕ್ಕಿರವೇಳ್ಕುಂ ಪ್ರಾಡ್ವಿವಾಕನೊರ್ವನೆ ಪಲಬರ್ ।
ನೆರೆಯಲ್ಕೆ ರಾಜಕಾರ್ಯ್ಯಂ
ಭರದಿಂ ದೆಸೆಗೆಟ್ಟು ಪೋಗದಿರ್ಪುದೆ ಸುಮತೀ ॥ ೧೭

ಗಣಕನೊಳ್ ಕೂರ್ತ್ತು ಕೃಷಿಫಲ
ಮುಣವೇಳ್ಕುಂ ಮನುಜನೀಸಿನೊಳ್ಪರೆಯಂ ಬಾ ।
ಸಣಿಸದುಪೇಕ್ಷಿಸೆ ಫಾಲೇ
ಕ್ಷಣರಥವುಂ ಭರದಿನೋಡಲಾರದು ಸುಮತೀ ॥ ೧೮

ಮದವುಡುಗಿದ ಕರಿಯುಂ ಕಡಿ
ಯದ ಪಾವುಂ ಸಾಧುವಾದ ಕರಣಿಕನುಂ ಬಾ ।
ಲದೆ ಮುಳ್ಳಿಲ್ಲದ ತೇಳುಮಿ
ವಿದಿರೊಳ್ಬರುತಿರೆಯುಮೆಣಿಸರಾರುಂ ಸುಮತೀ ॥ ೧೯

॥ ದೈ ವ ಪ ದ್ಧ ತಿ ॥

ತರಣಿಗಳವೋಲ್ ಬಂಡಿಗ
ಳಿರದಾಬಂಡಿಗಳವೋಲ್ ತರಣಿಗಳುಂ ಸಾ ।
ತ್ತ್ರರುವಂತೆಡರುಂ ಸಿರಿಯುಂ
ದೊರೆಕೊಳ್ವುವು ಕಾಲವಶದಿನಾರ್ಗ್ಗಂ ಸುಮತೀ ॥ ೨೦

ಯಕ್ಷಪತಿ ಮಿತ್ರನಾದೊಡ
ಮುಕ್ಷಧ್ವಜನಂದು ಭಿಕ್ಷಮೆತ್ತಿದನಾಪ್ತ ।
ರ್ಗ್ಗಕ್ಷೀಣವಿಭವಮಿರಲೇಂ
ರಕ್ಷಿಸುವುದು ತನ್ನ ಭಾಗ್ಯವೊಂದೆಲೆ ಸುಮತೀ ॥ ೨೧

ಸಮಯವಶದಿಂದೆ ಕಾನನ
ಮುಮಯತ್ನದೆ ಫಲಮನಾಂಪುದಾಫಲಸಮಯಂ ।
ಸಮನಿಸದಿರಲ್ಕೆ ಮನುಜಂ
ಸುಮೇರುವೇರಿದೊಡಮೇನುಮಿಲ್ಲಲೆ ಸುಮತೀ ॥ ೬೧

## ॥ ಸ್ತ್ರೀ ಪದ್ಧತಿ ॥

ಪೊರೆವಳ್ ಶೈಶವದೊಳ್ತಾಯ್
ಪೊರೆವಂ ತಾರುಣ್ಯದಲ್ಲಿ ರಮಣಂ ಜರೆಯೊಳ್ ।
ಪೊರೆವನ್ನಿಜಸುತರದರಿಂ
ಪರತಂತ್ರತೆಯಲ್ಲದಿಲ್ಲ ವನಿತೆಗೆ ಸುಮತೀ ॥ ೬೨

ಮುಪ್ಪಡಸಿದಂಗೆ ದುರ್ಗತಿ
ಕಪ್ಪಿಗೆ ಸಿಡಿಗಾಲ್ಬಧಂಗೆ ನಾಣಿಲಿವೆಣ್ಣಂ ।
ದಿಪ್ಪೊಡುರಗಕ್ಕೆ ರೋಗಂ
ತಪ್ಪದು ಪಿರಿದಪ್ಪ ಶೋಕಮಾಲಿಸು ಸುಮತೀ ॥ ೬೩

ಅಣಿಯಿಲ್ಲದ ಮಾನಿನಿ ಕಾ
ರಣಲೇಶಮುಮಿಲ್ಲದಿರ್ದ ಹಾಸ್ಯಂ ಗುಡಪೂ ।
ರಣಮಿಲ್ಲದ ಪೊರಿಗೆ ಬಾ
ಜಣಮಿಲ್ಲದ ಮದುವೆ ನಿಷ್ಫಲಂ ಗಡ ಸುಮತೀ ॥ ೬೪

ಕರಕೆ ತೊಡವರ್ಥಿಗೀವುದು
ಧರಣೀಪತಿಗಳ್ಗೆ ತೊಡವು ಸೂನೃತವಚನಂ ।
ತರುಣಿಗೆ ಮಾನಮೆ ತೊಡವೀ
ಧರೆಗೆಲ್ಲಂ ತೊಡವು ನೀತಿಯೊಂದೆಲೆ ಸುಮತೀ ॥ ೬೫

ಉದಕಮೆ ಜೀವಾಧಾರಂ
ವದನಮೆ ಮೃದುಮಧುರವಚನಸೀಚಯಕೆ ಸದನಂ ।

ಸುದತಿಯೆ ಗೃಹಕ್ಕೆ ರತ್ನಂ
ಸದಮಲದಂಬರಮೆ ತೊಡವು ಕೇಳಲೆ ಸುಮತೀ ॥ ೨೭

ಪರಿಕರ್ಮದೆ ಸುರವಧು ಪರಿ
ಚರಿಪೆಡೆಯೊಳ್ದಾಸಿ ಮಂತ್ರಿ ಮಂತ್ರದೆ ಭುಕ್ತ್ಯಾ ।
ದರಣೆಯೊಳ್ ಜನನಿಯೆಂದೆನ
ಲಿರವೇಳ್ಕುಂ ತನ್ನ ಪತಿಗೆ ಕುಲಸತಿ ಸುಮತೀ ॥ ೨೮

ಪ್ರಾಣಂ ಪುರಕ್ಕೆ ವಣಿಜಂ
ಪ್ರಾಣಂ ನೀರ್ನೆಲ್ಲಗರ್ದೆಗಾನೆಗೆ ಬರಿಕಯ್ ।
ಪ್ರಾಣಂ ಗೃಹಭಾಗ್ಯಕೆ ವೇಣ
ಪ್ರಾಣಂ ನಿಜಕಾಂತೆಯೆಂದು ಭಾವಿಸು ಸುಮತೀ ॥ ೨೯

ಮಾತಿಂಗೆ ಸತ್ಯಮಸು ಕಾಂ
ತಾತತಿಗಸು ಮಾನಮೋಲೆಗಕ್ಕರಮಸು ವಿ ।
ಖ್ಯಾತಬಲಮೆನಿಪ ಸುಭಟ
ವ್ರಾತಮೆ ಕೋಟೆಗಸುವೆಂದು ಭಾವಿಸು ಸುಮತೀ ॥ ೩೦

॥ ವಿ ವಿ ಧ ನೀ ತಿ ಗ ಳು ॥

ಏಗಳ್ಗಾವುದು ಸಂಗತ
ಮಾಗಳ್ಗಮಾತನಾಡಿ ತನ್ನ ಮನಕ್ಕಂ ।
ಲೋಗರ ಮನಕ್ಕಮುಮ್ಮಳ
ಮಾಗದ ತೆರದಿಂದೆ ನಡೆಯವೇಳ್ಕುಂ ಸುಮತೀ ॥ ೩೧

ನುಡಿಯಲ್ಕಾಗದು ಪುಸಿಯಂ
ಕೆಡೆನುಡಿಯಲ್ಕಾಗದಾರುಮಂ ಕೊಳುಗುಳದೊಳ್ ।
ಮಡಮುರಿಯಲಾಗದಾರ್ಯರ
ನುಡಿಯಂ ಕಡೆಗಣಿಸಲಾಗದೆಂದುಂ ಸುಮತೀ ॥ ೩೨

ತಳರದಿರೊರ್ವನೆ ಬಟ್ಟೆಯೊ
ಳೆಳಸದಿರನ್ಯರ ಧನಕ್ಕೆ ಕೂರದ ಮನುಜ ।
ರ್ಕ್ಕಳ ಮನೆಯೊಳುಣ್ಣದಿರ್ನೀ
ನುಳಿ ಪರಹೃದಯಂ ಬಳಲ್ವ ನುಡಿಯಂ ಸುಮತೀ ॥ ೩೩

ನಗದಿರ್ನೀನಾರ್ಯರೊಳಂ
ನಗದಿರ್ಪಿತೃಮಾತೃಗುರುಮಹೀಶರೊಳಂ ಮೇ ।
ಣ್ಣಗದಿರ್ಪರಾಂಗನೆಯೊಳಂ
ನಗದಿರ್ಸಭೆಯೊಳಮದೆಂದುಮಾಲಿಸು ಸುಮತೀ ॥ ೩೪

ಪೆರವೆಣ್ಗೊಡವುಟ್ಟಿದನಾ
ಗಿರು ಪೆರರ ಪೊಗಳ್ತೆಗುಬ್ಬದಿರ್ಪರಹಿತನಾ ।
ಗಿರು ಪರರಂ ನಿಂದಿಸದಿ
ರ್ಪರನಿಂದೆಗೆ ಮನದೆ ನೋಯದಿರ್ನೀಂ ಸುಮತೀ ॥ ೩೫

ಅರಸನಬಳಿಗಂ ಮಕ್ಕ
ಳ್ನರೆದೆಡೆಗಂ ಬಸುರಿಯಿರ್ಪ ಮನೆಗಂ ವಿದ್ಯಾ ।
ಗುರುವೆಡೆಗಂ ದೇಗುಲಕಂ
ಬರಿಕ್ಕೈಯೊಳ್ಪೋಗಲಾಗದೆಂದುಂ ಸುಮತೀ ॥ ೩೬

ಪರಸತಿಯೊಳ್ನುಡಿಯದಿರ್ಕೈ
ಸಿರಿ ಕಿಡೆ ಬಂಧುಗಳ ಮನೆಗೆ ಸೇರದಿರಸಮಾ ।
ನರ ಸಂಗಮಂ ವಿವರ್ಜಿಸು
ಪೆರರೊಡವೆಗದೆಂದುಮೆಳಸದಿರ್ನೀಂ ಸುಮತೀ ॥ ೩೭

ಅನ್ಯರ್ಗ್ಗಹಿತಮನೆಸಗದಿ
ರನ್ಯಗೃಹಂಗಳ್ಗೆ ನಿರ್ನೆರಂ ಪೋಗದಿರಂ ।
ತನ್ಯವಧುಗಳುಪದಿರ್ಕ್ಕ
ರಿನ್ನೆಂದಳೆದಶ್ವಮೇರದಿರ್ನೀಂ ಸುಮತೀ ॥ ೩೮

ಅರಸರಿಯದ ಸೇವೆಯನುಳಿ
ಪಿರಿದಾಸೆಯನೊಂದವೇಡ ಮದುವೆಯ ಮನೆಗಂ ।

ಪೆರರೆಸಗುವ ಕಾರ್ಯಕ್ಕಂ
ಕರೆಯದೆ ನೀಂ ಪೋಗವೇಡದೆಂದುಂ ಸುಮತೀ ॥ ೩೯

ಬತ್ತೆಯಿಡವೇಡ ಪೊನ್ನಂ
ಬಿತ್ತರಿಸಲ್ವೇಡ ಋಣವನಂಗಡಿಯೊಳಗು ।
ನ್ಮಿತ್ತರ ನೇಹಮನುಳ ಕಳ
ದತ್ತಣಿನೋಡದಿರು ಭಯದಿನೆಂದುಂ ಸುಮತೀ ॥ ೪೦

ನೆರೆ ಬಲ್ಲಿದನಾನೆಂದೆ
ಲ್ಲರೊಳಂ ಬಿರುನುಡಿಯನಾಡುವುದು ಪೊಲ್ಲದು ಕೇ ।
ಳಿರುವೆಗಳ್ ಸಂಗಳಿಸಿ ಪೇ
ರುರಗಮನಿರಿದಿರಿದು ಕೊಂದುವಲ್ಲವೆ ಸುಮತೀ ॥ ೪೧

ನಿರವಿಸಿ ನುಡಿದುಮದರ್ಕ್ಕೋ
ಸರಿಸದಿರಾಪ್ತರನೆ ಪಳಿಯದಿರ್ಮ್ಮತ್ಸರವನಾಂ ।
ಪರಸನ ಸೇವಿಸದಿರ್ಮ್ಮೋ
ಣ್ದುರಿತಾಸ್ಪದಮಪ್ಪ ದೇಶವಂ ಬಿಡು ಸುಮತೀ ॥ ೪೨

ನಯವಿದನೆ ಬಲ್ಲಿದಂ ನೀ
ತಿಯನರಿಯದ ಧನಿಕನಿಂದೆ ಗಿರಿಯವೊಲಿರ್ದ್ದಾ ।
ನೆಯಮೇಲೆ ಜೋದನೀರ
ಳ್ಭಯದಿಂದದು ಕರ್ಗ್ಗಿ ಪೋಪುದಿಲ್ಲವೆ ಸುಮತೀ ॥ ೪೩

ಸರಸಂ ವಿರಸಕೆ ಜನಿಪುದು
ಮರಣಕೆ ಮೇಣ್ಬಳೆವುದುಡಿವುದರ್ಕ್ಕಲೆ ಜಗದೊಳ್ ।
ಹರಿಸಂದಳೆವುದು ದುಃಖಕೆ
ಪಿರಿದುಂ ತಗ್ಗುವುದು ವೃದ್ಧಿಗೆಂದರಿ ಸುಮತೀ ॥ ೪೪

ಜನಬಲಮಿಲ್ಲದ ಕಡೆಯೊ
ಳ್ಮನವೊಲ್ಲದ ಕಡೆಯೊಳಿಷ್ಟರಿಲ್ಲದ ಕಡೆಯೊಳ್ ।
ಅನಿಮಿತ್ತಕಲಹದೆಡೆಯೊ
ಳ್ಮನುಜಂ ನಿಲಲಾಗದೆಂದುಮಾಲಿಸು ಸುಮತೀ ॥ ೪೫

ಇರೆ ವತ್ಸರಶತಮುಡುವಜ
ಗರಮಬ್ಧಸಹಸ್ರಮಿರೆ ಸರೋವರದೆ ಬಕಂ ।
ಪಿರಿದುಂ ಬರ್ದುಕಿರೆ ಫಲವೇಂ
ಪುರುಷಂ ಪುರುಷಾರ್ಥಮೆಯ್ದವೇಳ್ಕುಂ ಸುಮತೀ ॥ ೪೬

ತನ್ನಯ ಮುಳಿಸೇ ತನಗರಿ
ತನ್ನಯ ಸೈರಣೆಯೆ ರಕ್ಷೆ ಕರುಣೆಯೆ ನಂಟಂ ।
ತನ್ನ ಮನದೊಲವೆ ಸಗ್ಗಂ
ತನ್ನಯ ಮನದಳಲೆ ನರಕಮಾರ್ಗಂ ಸುಮತೀ ॥ ೪೭

ತೂಗೆಚ್ಚ ಭಟನ ಬಾಣಂ
ತಾಗುವುದೊರ್ವ್ವಂಗೆ ಮೇಣದೋಸರಿಪುದು ನೀ ।
ತ್ಯಾಗಮುಮರಿವನ ತಂತ್ರಂ
ಬೇಗನೆ ಭೇದಿಪುದು ಶತ್ರುರಾಜ್ಯವ ಸುಮತೀ ॥ ೪೮

ನೀತಿಗಳ ರೀತಿಯಂ ತಿಳಿ
ದಾತಂಗಾತಂಕಮುಂಟೆ ಕೇಡಿನ ದೆಸೆಯಿಂ ।
ಪೋತಮನಾರೋಹಿಸಿ ಪೋ
ಪಾತಂಗಾತಂಕಮುಂಟೆ ಜಲದಿಂ ಸುಮತೀ ॥ ೪೯

ಮಂದಂಗೆ ನವರಸಂಗಳ
ನೊಂದಿದ ಸತ್ಕವಿಯ ಕೃತಿಯುಮಂ ಗೀತಮುಮಂ ।
ಚಂದದೆ ಪೇಳ್ವುದು ಕಿವುಡನ
ಮುಂದೆಸೆಯೊಳ್ಶಂಖಮೂದಿದಂತಲೆ ಸುಮತೀ ॥ ೫೦

